# ಘಟನೆಗಳು ನಮ್ಮವಲ್ಲ

ಕೆ. ಎಂ. ವಿಜಯಲಕ್ಷ್ಮಿ

ಸಮರ್ಥ

ಬೆಂಗಳೂರು-79

GHATANEGALU NAMMAVALLA—A Kannada Social Story written by Smt. Vijayalakshmi, Printed at Chandana Printers 635, 2nd Block 3rd Stage West of Chord Road B'lore-79 and Published by SAMARTHA PRAKASHANA 635, 2nd Block 3rd Stage, West of Chord Road, Bangalore,

ಪ್ರಕಾಶಕರು : ಸಮರ್ಥ ಪ್ರಕಾಶನ
635, 2ನೇ ಬ್ಲಾಕ್, 3ನೇ ಘಟ್ಟ
ವೆಸ್ಟ್ ಆಫ್ ಕಾರ್ಡ್ ರೋಡ್,
ಬೆಂಗಳೂರು–560 079

ಮುದ್ರಣ : ಚಂದನ ಪ್ರಿಂಟರ್ಸ್
635, 2ನೇ ಬ್ಲಾಕ್, 3ನೇ ಘಟ್ಟ
ವೆಸ್ಟ್ ಆಫ್ ಕಾರ್ಡ್ ರೋಡ್,
ಬೆಂಗಳೂರು–560 079

ಬೆಲೆ : ಇಪ್ಪತ್ತೆರಡು ರೂಪಾಯಿ

# ಒಳಗಿನದನ್ನು ಓದುವ ಮುನ್ನ

"ದಾರೀಲಿ ಬಿದ್ದ ಯಾರೋ ಒಬ್ಬನನ್ನು ಎತ್ತಿ, ಸಹಾಯ ಮಾಡೋಕೆ ಹೋದಾಗ. ಅವ್ನ ಪ್ರಾಣವೇ ಹೋಗಿ, ಅದೊಂದು ದೊಡ್ಡ ಆಪತ್ತಾಗಿ, ಕಡೆಗೆ, ಬಿದ್ದವನನ್ನು ತಮ್ಮ ಕಾರಲ್ಲಿ ಮಲಗಿಸಿ ಸಹಾಯಿಸಲು ಹೋದವರು ಅದರಿಂದ ಮುಕ್ತರಾಗಿ ಹೊರಬರಲು ಏನೇನೆಲ್ಲ ಪಾಡು ಪಡಬೇಕಾಯ್ತು ಗೊತ್ತಾ ? ಏನೇ ಉಪಕಾರ ಮಾಡ್ಬೇಕಾದ್ರೂ ಯೋಚ್ನೆ ಮಾಡ್ಬೇಕೀಗ", ಎನ್ನುವ ಅಸ್ಪಷ್ಟ ಮಾತನ್ನು, ನಾಲ್ಕೈದು ವರ್ಷಗಳ ಹಿಂದೆ, ಯಾವುದೋ ಮದುವೆಯ ಮನೆಯಲ್ಲಿ, ಹೊಸದಾಗಿ ಪರಿಚಿತರಾದವರೊಬ್ಬರು, ಇನ್ನಾವುದೋ ಮಾತಿಗೆ ಉದಾಹರಣೆಯಾಗಿ ಹೇಳಿದ್ದು ನನ್ನ ಮನಸ್ಸಿನಲ್ಲಿ ಉಳಿದಿತ್ತು. ಬಿದ್ದವರು ಯಾರು ? ಅವರು ಸತ್ತದ್ದು ಹೇಗೆ ? ಸಹಾಯಿಸಲು ಹೋದವರು ಯಾರು ? ಹೇಗೆ, ಏನೆಂದು ತೀರ್ಮಾನಗೊಂಡಿತು ? ಎಂಬೆಲ್ಲ ವಿವರಗಳನ್ನು ಕೇಳಬೇಕೆಂದು ಹಲವು ಸಲ ಅನ್ನಿಸಿದರೂ, ಏನೇನೋ ಕಾರಣಗಳಿಂದ, ನನಗೆ ಅವರನ್ನು ಪುನಃ ಭೇಟಿಯಾಗುವ ಸಂದರ್ಭ ಒದಗಲೇ ಇಲ್ಲ. ಆದರೆ ಈ ವಿಷಯ ಮಾತ್ರ ಸಣ್ಣ ಕಥೆಯೊಂದಕ್ಕೆ ಒಳ್ಳೆಯ ವಸ್ತು ಎನಿಸಿ, ನಾನೇ ಕಲ್ಪನೆಯ ಆಧಾರದ ಮೇಲೆ ಬರೆಯತೊಡಗಿದೆ. ಸಹಾಯಿಸ ಹೋದವರು ಸಿಕ್ಕಿಕೊಂಡಂತೆಯೇ, ಕಥೆಯೂ ನನ್ನ ಲೇಖನಿಗೆ ಸಿಕ್ಕಿಕೊಂಡು, ಬೆಳೆಯುತ್ತಾ ಬೆಳೆಯುತ್ತಾ ಕಿರು ಕಾದಂಬರಿಯಾಗಿ ಕೊನೆಗೊಂಡಿತು. ಈ ಕಿರು ಕಾದಂಬರಿ ಪುನಃ ಎರಡು ವರ್ಷಗಳವರೆಗೆ ನನ್ನ ಕಪಾಟುಗಳ ಬಂಧಿಖಾನೆಯಲ್ಲೇ ಉಳಿದಿದ್ದು, ಶ್ರೀಮತಿ ಎಚ್. ಎಸ್. ಪಾರ್ವತಿಯವರ ಕಣ್ಣಿಗೆ ಬಿದ್ದ ಮೇಲೆ ಹೊರಬರುವಂತಾಗಿದೆ.

ಬರೆದು 2 ವರ್ಷಗಳಾಗಿದ್ದರೂ, ಹಲವು ಶೀರ್ಷಿಕೆಗಳು ನನ್ನ ತಲೆಯಲ್ಲಿ ಬಂದು ಹೋಗಿದ್ದರೂ, ಯಾವುದೂ ನನಗೆ ಸಮಾಧಾನ ಕೊಟ್ಟಿರಲಿಲ್ಲ. ಪಂಚೇಂದ್ರಿಯಗಳು ನಮ್ಮವೇ ಆದರೂ, ನಮ್ಮ ಮನಸ್ಸೇ ಕಡಿವಾಣ ಹಾಕು

ತ್ತಿದ್ದರೂ, ಕೆಲವು ಸಲ ನಮ್ಮ ಇಷ್ಟಕ್ಕೆ ವಿರುದ್ಧವಾಗಿ ಬೇರೊಂದು ಕ್ರಿಯೆ ನಮ್ಮಿಂದಲೇ ನಡೆಸುವ ಯಾವುದೋ ಅದೃಶ್ಯ ಶಕ್ತಿಯೊಂದಿದೆ ಎಂದು ನನ್ನ ಮನಸ್ಸಿಗೆ ಅನಿಸಿತ್ತು. ಈ ಕಾದಂಬರಿಯ ಮೊದಲ ಘಟನೆ, ಈ ಅನಿಸಿಕೆಗೆ ಉದಾಹರಣೆಯಾಗಿದೆ ಎನಿಸಿದಾಗ, ಈ ಪುಸ್ತಕಕ್ಕೆ "ಘಟನೆಗಳು ನಮ್ಮವಲ್ಲ" ಎನ್ನುವ ಹೆಸರು ಸೂಕ್ತವಾಗಿ ಕಂಡಿತು, ಓದುಗರಿಗೆ, ಈ ಹೆಸರು, ಕಾದಂಬರಿಯೂ ಒಪ್ಪಿಗೆಯಾಗಬಹುದೆಂದು ನನ್ನ ನಂಬಿಕೆ.

ಇದರಲ್ಲಿ ಬರುವ ಕಾನೂನಿನ ಕೆಲವು ಅಂಶಗಳನ್ನು ತಿಳಿಸಿದ ವಕೀಲರಾದ ಶ್ರೀ ಶ್ರೀನಿವಾಸ ಉಪಾಧ್ಯರಿಗೂ, ಇದನ್ನು ಪ್ರಕಟಣೆಗೆ ಕೊಡುವಂತೆ ಕೇಳಿ ತೆಗೆದುಕೊಂಡ ಶ್ರೀಮತಿ ಎಚ್. ಎಸ್. ಪಾರ್ವತಿಯವರಿಗೂ, ಪ್ರಕಟಿಸಿ ನನ್ನ ಈ ಪ್ರಥಮ ಕಿರುಕಾದಂಬರಿಯನ್ನು ಎಲ್ಲರ ಮುಂದಿಡುತ್ತಿರುವ ಸಮರ್ಥ ಪ್ರಕಾಶನದ ಶ್ರೀ ದಿನೇಶ್‌ರವರಿಗೂ ಮತ್ತು ನನ್ನ ಬರವಣಿಗೆಯ ರೀತಿಯನ್ನು ಮೆಚ್ಚಿಕೊಂಡಿರುವ ಇತರ ಎಲ್ಲ ಪ್ರೋತ್ಸಾಹಕರಿಗೂ ನನ್ನ ವಂದನೆಗಳು.

**ಕೆ. ಎಂ. ವಿಜಯಲಕ್ಷ್ಮಿ**

# ಘಟನೆಗಳು ನಮ್ಮವಲ್ಲ

ಆರಂಭಿಕ ಮಳೆಗಾಲದ ಒಂದು ದಿನದ ಸಂಜೆ 7½ ಘಂಟೆಯ ಸಮಯ. ದೂರದಿಂದ ಬಂದ ಕಾರೊಂದು ರಸ್ತೆಯುದ್ದಕ್ಕೂ ಮಲಗಿದ ಕತ್ತಲನ್ನು ತನ್ನ ಎರಡು ಕಣ್ಣುಗಳಿಂದ ಸೀಳುತ್ತ ಬರುತ್ತಿದೆ. ಸೀಳಿಹೋದ ಕತ್ತಲು. ಹಿಂದಿನಿಂದ ಒಟ್ಟಾಗಿ ಬಂದು ಮತ್ತೆ ಕಾರಿನ ಮೇಲೆ ಹಾರಿ ಬೀಳುತ್ತಿದೆ. ಜನಸಂಖ್ಯೆ ಅತಿ ಕಡಿಮೆ ಇರುವ ಬೃಂದಾ ಟಾಕೀಸಿನ ಹಿಂದಿರುವ, ಆ ಉದ್ದ ನೆಯ 4ನೇ ಮುಖ್ಯ ರಸ್ತೆಯಲ್ಲಿ, ರೋಸ್ ಗಾರ್ಡನ್‌ಗೆ ಮೊದಲು, ಅದೋ ಆ ಬೀದಿ ದೀಪದ ಅಡಿಯಲ್ಲಿ, ನಾಲ್ಕು ಮಂದಿ ಸುತ್ತುಕಟ್ಟಿ ನಿಂತಿರುವಲ್ಲಿ, ಯಾರೋ ಮಲಗಿದಂತಿದೆ. ಹೆಂಡತಿಯೊಡನೆ ಮಾತಾಡುತ್ತ ಸ್ಟೇರಿಂಗ್ ವ್ಹೀಲ್ ತಿರುಗಿಸುತ್ತಿದ್ದವ ಒಮ್ಮೆ ಅತ್ತ ಕಣ್ಣು ಹಾಯಿಸಿದ. ಅನಾಸಕ್ತಿಯಿಂದಲೇ ಸುಮ್ಮನೇ ಕಿಟಕಿಯಿಂದ ಇಣುಕಿದಾಗ ಕಂಡದ್ದು ದೀಪದಡಿ ಮಲಗಿರುವ ಯಾವುದೋ ಶ್ರೀಮಂತ ದೇಹ. ಕುತೂಹಲದಿಂದ ನೋಡುತ್ತ ಕಾರಿನ ವೇಗ ನಿಧಾನಿಸಿದ. ಮಗ್ಗುಲಾಗಿ ಮಲಗಿ, ಮೆಲ್ಲಗೆ ಮುಲುಗುತ್ತಲಿರುವ ಯಾರೋ ತರುಣ. ಕಾರಿನಲ್ಲಿ ಕುಳಿತು, ಒಬ್ಬರಿಗೊಬ್ಬರು ಛೇಡಿಸಿಕೊಂಡು ನುಗ್ಗುತ್ತಿದ್ದ ದಂಪತಿಗಳು, ಬಾಯಿ ಮುಚ್ಚಿ, ಕುತೂಹಲ ತುಂಬಿಸಿಕೊಂಡರು ಕಣ್ಣಲ್ಲಿ. ದಷ್ಟಪುಷ್ಟ ಶರೀರದ ಮೇಲೆ ಗರಿಗರಿ ಉಡುಪು, ದಾರಿದೀಪದ ಪ್ರಕಾಶದಲ್ಲಿ ಎದ್ದು ಕಾಣುತ್ತಿರುವ ಗೌರ ವರ್ಣದ ಲಕ್ಷಣವಾದ ಮುಖ, ನೋಡಿದರೆ ಯಾವುದೋ ಅನುಕೂಲಸ್ಥ

ಕುಟುಂಬದ ಹುಡುಗ ಎನ್ನುವುದು ಮನವಟ್ಟಾಗುವಂತಿದೆ. ಆದರೆ ಅವನಿಗೆ ಆಗಿರುವುದು ಏನು ? ಯಾಕೆ ಹೀಗೆ ಮಲಗಿ ನರಳುತ್ತಿದ್ದಾನೆ ? ಇಲ್ಲಿ ? ಈ ಜನರಿಲ್ಲದ ಬೀದಿ ಬದಿಯಲ್ಲಿ ? ಕುಡಿದು ಬಿದ್ದಿರಬಹುದೇ ? ತನ್ನ ಪರಿಚಿತರೇ ಯಾರಾದರೂ ಆಗಿರಬಹುದೇ ?

ಕಾರು ನಿಧಾನಗೊಂಡಿತು. ನವವಿವಾಹಿತರು ಯೋಚನೆಯ ತಂತಿ ಮಿಂಚಿ ಪರಸ್ಪರ ಪ್ರಶ್ನಿಸಿಕೊಂಡರು. ಅಪಘಾತವೇ ? ಯಾವ ವಾಹನ ದೊಂದಿಗೆ ? ವಾಹನವೂ ಇಲ್ಲ ಅಲ್ಲಿ. ಗಾಯ, ಗಾಜು, ರಕ್ತ ಇತ್ಯಾದಿಗಳ ಕುರುಹೂ ಇಲ್ಲದೇ ಅಪಘಾತ ಹೇಗೆ ?

"ಫಿಟ್ಸ್ ಇರಬಹುದೇನು" ?

"ಅಂ ಫಿಟ್ಸ್" ? ಎನ್ನುವ ಮರುಪ್ರಶ್ನೆಯೊಂದಿಗೆ ನೂರು ಘಟನೆಗಳು ಸುಮನಳ ತಲೆ ಸುತ್ತ ತಿರುಗಿದವು. 14 ವರ್ಷ ವಯಸ್ಸಿನ ತನ್ನ ಅಕ್ಕನ ಮಗ ರಾಜು, ಇದೇ ಫಿಟ್ಸ್‌ನಿಂದಲೇ ಎಷ್ಟು ಸಲ ಬಿದ್ದಿದ್ದನೋ ? 2 ಸಲ ಹೊರಗಡೆಯಲ್ಲಿ ಯಾವುದೋ ರಸ್ತೆಗಳಲ್ಲಿ ಬಿದ್ದು ಯಾರೋ ಮನೆಗೆ ತಂದೊಪ್ಪಿಸಿದ್ದರು. ಆಮೇಲೆ ಅವನಿಗೆ ಒಬ್ಬನೇ ಹೊರ ಹೋಗಲು ಬಿಡುತ್ತಲೇ ಇರಲಿಲ್ಲ. ಆದ್ರೂ ಅವನು ಕೇಳಬೇಕಲ್ಲಾ ? ಹ್ಞಾ, ಆದ್ರೆ ಫಿಟ್ಸ್ ಬಂದ್ರೆ ಅಂಗಾತ್ತನಾಗಿ ಮಲಗ್ತಾರೆ ಅಲ್ವಾ ? ಹೀಗೆ ಮಗ್ಗಲು ಮಲಗೋಲ್ಲ", ಅವಳು ಕೇಳಿದಳು ಅನುಮಾನದಿಂದ.

"ಅದ್ರಲ್ಲಿ ಎಷ್ಟು ತರಹಾ ಇದ್ಯೋ ಯಾರಿಗ್ಗೊತ್ತು ? ಕೆಲವರು ಸುಮ್ನೆ ಕುಡಿದು ಕೂತ್ಕೋತಾರೆ, ಬುರುಗೂ ಬರೋಲ್ಲ ನಡಗೋದೂ ಇಲ್ಲ. ಹೋಗ್ಲಿ ಬಿಡು ಯಾವೋನೋ ಏನೋ, ನಮಗ್ಯಾಕೆ ಅವನ ಚಿಂತೆ. ನಾವು ಆದಷ್ಟು ಬೇಗ ಮಹಿಮಾಪುರ ಮುಟ್ಟೋಣ", ಎನ್ನುತ್ತಾ ಸ್ಟೀರಿಂಗ್ ಹಿಡಿದವನ ಕೈ ಮೇಲೆ ಕೈ ಇಟ್ಟು ತಡೆದಳು ಅವಳು. "ನಮ್ಮ ರಾಜೂ ಹಾಗೇ ಇವ್ನೂ ಅಲ್ವಾ ? ನೋಡೋಣ ತಾಳಿ ಏನಾಗಿದೆ, ಯಾರೂಂತ ಗೊತ್ತಾದ್ರೆ, ಅಡ್ರೆಸ್ಸೂ ಸಿಕ್ಕಿದ್ರೆ ಮನೆಗೆ ಮುಟ್ಟಿಸೋಣ. ಇಲ್ಲವಾದ್ರೆ

ಯಾವ್ದಾದ್ರೂ ಆಸ್ಪತ್ರೆಗೆ ಸೇರಿಸಿಬಿಡೋಣ. ಹುಶಾರಾದ್ಮೇಲೆ ಅವನೇ ಹೋಗ್ತಾನೆ", ರೋಗಿಯುನ್ನು ತಮ್ಮ ರಾಜುನೊಂದಿಗೆ ಹೋಲಿಸಿಕೊಂಡು ಕರುಣೆ ತೋರಿ ಹೇಳಿದಳು ಸುಮನಾ.

ಕಾರು ರಸ್ತೆಯಲ್ಲಿ ನಿಧಾನಗೊಂಡಿದ್ದೇ ತಡ, ಬಿದ್ದವನ ಬಳಿ ನಿಂತು ಯೋಚಿಸುತ್ತಾ ನಿಂತಿದ್ದ ನಾಲ್ವರಲ್ಲಿ ಇಬ್ಬರು ಕಾರಿನ ಬಳಿಗೆ ಬಂದು, "ಯಾರೋ ಹುಡುಗ ಪಾಪ ಜೋರಾಗಿ ಡ್ರೆಸ್ ಮಾಡಿಕೊಂಡಿದಾನೆ, ಇಲ್ಲಿ ಬಂದು ಬಿದ್‌ಬಿಟ್ಟಿದ್ದಾನೆ. ವಯಸ್ಸು 20ಕ್ಕಿಂತ ಹೆಚ್ಚಾಗಿಲ್ಲ ನಿಮ್ಮ ಕಾರಲ್ಲಿ ಮಲಗಿಸಿ ಯಾವುದಾದ್ರೂ ಹಾಸ್ಪಿಟಲ್‌ಗೆ ಸೇರ್ಸಿಬಿಡಿ ಪಾಪ. ಯಾರಾದ್ರೇನು ಎಲ್ಲಾ ಮನುಷ್ಯರೆ" ಎಂದು ಕೇಳಿಕೊಳ್ಳುವಾಗ, ಮೂರನೆಯವನೂ ಬಂದು ಅವರೊಡನೆ ದನಿಗೂಡಿಸಿದ. "ನೋಡಿ ಸಾರ್, ಆಟೋನಲ್ಲಿ ಆಸ್ಪತ್ರೆಗೆ ಕರ್ಕೊಂಡ್ ಹೋಗೋಣಾಂದ್ರೆ ಇಲ್ಲೀತನಕ ಈ ಕಡೆ ಒಂದೂ ಆಟೋ ಸುಳಿದಿಲ್ಲ, ಇಲ್ಲಿ ಬೆಳಗಿನ ಹೊತ್ತೇ, ಖಾಲಿ ಆಟೋಗಳು ಈ ದಾರಿಯಲ್ಲಿ ಸಿಗೋದು ಅಪರೂಪ, ಇನ್ನು ಇಷ್ಟು ಹೊತ್ನಲ್ಲಿ ಎಲ್ಲಿ ಸಿಕ್ಬೇಕು ? ಪಾಪ ನರಳ್ತಾ ಇದಾನೆ ಹುಡ್ಗ ನಮ್ಮ ನಿಮ್ಮ ಹಾಗೆ ಅವ್ನೂ ಅಲ್ವಾ" ?

ದಯಾಕರ, ಕಾರಿನ ಗಾಜಿನ ಮೂಲಕ ಉದ್ದಕ್ಕೂ ಮಲಗಿದ ರಸ್ತೆಯ ಕಡೆ ನೋಡಿದ್ದ. ದೂರ ದೂರದಲ್ಲೊಂದು ಬೀದಿ ದೀಪಗಳು. ಅದರಡಿ ಸ್ವಲ್ಪ ಬೆಳಕು ಬಿಟ್ಟರೆ ರಸ್ತೆಯ ಎರಡೂ ಬದಿಗಳಲ್ಲಿ, ಉದ್ದನೆಯ ಕತ್ತಲು ಹೊದ್ದ ತೋಟಗಳು, ದೂರದಲ್ಲಿ ಅಲ್ಲಲ್ಲಿ ಒಂದೊಂದು ವ್ಯಕ್ತಿಯ ಆಕಾರಗಳು ಓಡಾಡುತ್ತಿರುವುದು ಕಾಣಿಸಿತಷ್ಟೆ. ಎಲ್ಲೂ ಆಟೋಗಳ ಸುಳಿವಿಲ್ಲ. ಈಗ ತಾನೇ ಕಾರಿನ ಪಕ್ಕದಿಂದ ಹಾದುಹೋದ 2 ಆಟೋಗಳಲ್ಲೂ, ಮೂರು ಮೂರರಂತೆ ಜನಗಳು ಕೂತಿದ್ದು ನೋಡಿದ್ದ. ಇದು ಬೆಂಗಳೂರು ಮಹಾನಗರ. ಆದರೆ ಬೇಕೆನಿಸಿದಾಗ ಏನೇ ಆದರೂ ಸಿಗದು, ಈ ಮಹಾನಗರದಲ್ಲಿ ಮಹಾ ದುರ್ಲಭವೇ ಎಂದುಕೊಂಡ.

ಅಲ್ಲಿ ನಿಂತಿದ್ದ ಮೂವರೂ ದಯಾಕರನನ್ನು ಬಂದು ಬೇಡಿದಾಗ, ಪಕ್ಕದಲ್ಲಿದ್ದ ಮಡದಿಯೂ ಇದೇ ರೀತಿ ಸೂಚನೆ ಇತ್ತಾಗ ದಯಾಕರನ ಮನಸ್ಸು ತೂಗಾಡಿತು. ಮಧುಚಂದ್ರಕ್ಕಾಗಿ ಊಟಿ, ಕಾಶ್ಮೀರ, ಡಾರ್ಜಿ

ಲಿಂಗ್‌ಗಳ ಯಾತ್ರೆ ಇಟ್ಟುಕೊಂಡ ತಾವು, ತಮ್ಮ ಪಾಡಿಗೆ ತಾವು ದಾರಿ ಬಿಡುವುದು ಕ್ಷೇಮವೇ, ಇಲ್ಲವೇ ಯಾವನೋ ಇವರನ್ನು?——ಪಾಪ ಎನ್ನುವ ಮರುಕ ಹುಟ್ಟಿದ್ದರೂ ದಯಾಕರನಿಗೆ ಏಕೋ ಹಿಂದೇಟು, ಹುಟ್ಟಿದ ಕುತೂಹಲವೋ, ಯಾರೋ ಒಬ್ಬ ಗುರುತಿಲ್ಲದ ಹುಡುಗ ಎಂದು ತಿಳಿದಾಗ, ಆರಿ ಹೋಗಿತ್ತು. ಆದಷ್ಟೂ ಬೇಗ ಮಹಿಮಾಪುರ ಸೇರಿಬಿಡುವ ಆತುರ ಬೇರೆ.

"ಮಹಿಮಾಪುರ ಮುಟ್ಟೋದು ಅರ್ಧಘಂಟೆ ಲೇಟಾದ್ರೇನಂತೆ? ಇವತ್ತಿನ ಇಡೀ ರಾತ್ರೀನೇ ನಮ್ಮುಂದೆ ಇದೆ ಅಲ್ವಾ? ಪಾಪರೀ ನಂಗೇಕೋ ಅವನನ್ನು ನೋಡಿದ್ರೆ ಪಾಪ ಅನಿಸುತ್ತೆ, ನಮ್ಮ ರಾಜೂ ಹಾಗೇ ಇವ್ನೂ ಅಲ್ವಾ?" ಸುಮನಾ ದಯಾಕರನ ಕೈ ತಟ್ಟಿ, ಮುಖದ ತುಂಬಾ ಕರುಣೆ ತುಂಬಿ ಹೇಳಿದಳು.

ಸಹೃದಯೀ ದಯಾಕರನ ಹೃದಯ, ಅವರೆಲ್ಲರ ಮಾತಿಗೆ ಇಲ್ಲವೆನ್ನಲಾಗದೇ ಸುಮ್ಮನೆ ತಲೆ ಆಡಿಸಿ ಅವನನ್ನು ಕೆಳಗಿಳಿಸಿತು. ಹುಡುಗನ ಜೇಬು, ಪರ್ಸ್‌ಗಳನ್ನು ತಡಕಾಡಿದಾಗ ಇಪ್ಪತ್ತು ರೂಪಾಯಿ ನೋಟಿನ ಜೊತೆ. ಅವನ ಮನೆಯ ವಿಳಾಸ ಸಿಕ್ಕಿತು. ಕೃಷ್ಣಾ ನಗರದ 1ನೇ ಬ್ಲಾಕ್‌ನಾಚೆ? ಪಾಕೆಟ್ ಡೈರಿಯಲ್ಲಿದ್ದ ವಿಳಾಸ ಓದಿಕೊಂಡು ಹುಬ್ಬು ಹಾರಿಸಿದ ದಯಾಕರ, ಅಬ್ಬ; ಬೆಡಗಿನ ಮಹಾನಗರದ ದಕ್ಷಿಣ ಭಾಗದ ಒಂದು ರಸ್ತೆಯಲ್ಲಿ ಬಿದ್ದು ನರಳುತ್ತಿದ್ದ ದೇಹಕ್ಕೆ. 15 ಕಿ. ಮೀ. ನಾಚೆಯ ಉತ್ತರ ಭಾಗದ, ಕೃಷ್ಣಾ ನಗರದ ಕೊನೆಯಲ್ಲಿ ಆಸರೆಯ ಮೇಲ್ವಾವಣಿ. ಅಷ್ಟು ದೂರ ಹೋಗಬೇಕೇ ತಾನೀಗ?

"ನೀವೆಲ್ಲಿಗೆ ಸಾರ್ ಹೊರಟಿರೋದು ಈಗ? ದಾರೀಲಿ ಸಿಗೋ ಆಸ್ಪತ್ರೆಗೆ ಸೇರಿಸಿಬಿಡೋಣ"? ಕೃಷ್ಣಾ ನಗರದ ಹೆಸರು ಕೇಳಿಯೇ, ಕಣ್ಣೇರಿಸಿದ, ಅಲ್ಲಿದ್ದವರಲ್ಲಿ ಹಿರಿಯರಾದ ಮುದುಕರೊಬ್ಬರು ಸಲಹೆ ಇತ್ತರು. "ಅಷ್ಟು ದೂರ ಈಗೆಲ್ಲಿ ಹೋಗೋಕೆ ಸಾಧ್ಯ?" ಮಹಿಮಾಪುರಕ್ಕೆ" ಉತ್ತರಿಸಿದ ದಯಾಕರ.

"ಓ ಸರಿ ಬಿಡಿ, ದಾರೀಲಿ ಸಿಗೋ ಯಾವ್ದಾದ್ರೂ ಸರ್ಕಾರಿ ಆಸ್ಪತ್ರೆಗೆ ಕರೆದೊಯ್ದು ಸೇರಿಸೋಣ. ನರ್ಸಿಂಗ್ ಹೋಂ ಅಂದ್ರೆ ದುಡ್ಡು ಗಿಡ್ಡು

ಎಷ್ಟು ಕೊಡಬೇಕಾಗುತ್ತೋ? ಪ್ರೈವೇಟ್ ಡಾಕ್ಟರ್ಸ್ ಅಂದ್ರೆ ದುಡ್ಡು ಜಾಸ್ತೀನೇ. ನಮ್ಮನೆಯಾಕೆ ಊರಿಗೆ ಹೊರ್ಟಿದಾಳೆ, ನಂಗೂ ಸ್ವಲ್ಪ ಅರ್ಜೆಂಟ್ ಇದೆ ಆದ್ರೂ ಬರ್ತೀನಿ ನಡೀರಿ" ಅದೇ ಮುದುಕರೇ ಸೂಚಿಸಿದರು.

ಹುಡುಗ ಸಣ್ಣಗೆ ಮುಲುಗುತ್ತಲೇ ಇದ್ದ. ನಾಲ್ವರೂ ಸೇರಿ ಅವನನ್ನು ಎತ್ತಿದಾಗ ನರಳಾಟ ತುಂಬಾ ಜೋರಾಗಿ, ಉಳಿದವರ ಉಸಿರಾಟದಲ್ಲಿ ನೋವು ಬೆರೆಸಿತ್ತು. ಸಾವಕಾಶವಾಗಿ ಸೀಟಿನ ಮೇಲೆ ಮಲಗಿಸಿದ ಮೇಲೆ, ಮುಲುಗುವಿಕೆ ಮತ್ತೆ ಸಣ್ಣಗಾಯಿತು.

ಮುದುಕರು ಕಾರು ಹತ್ತಿ ರೋಗಿಯ ಸೊಂಟದ ಮುಂದೆ ತುದಿ ಸೀಟಿನಲ್ಲಿ ಕುಳಿತು, ಕೆಳಗಿದ್ದವರಲ್ಲಿ ಒಬ್ಬರಿಗೆ,

"ನಾನು ಹೋಗಿ ಬರ್ತೀನಿ, ನೀವು ನಿಮ್ಮ ಕೆಲ್ಸ ನೋಡ್ಕೊಳಿ" ಎಂದು ಕೈಯಾಡಿಸಿದರು. ಕೆಳಗೆ ನಿಂತಿದ್ದ ಇನ್ನಿಬ್ಬರು ಏನೂ ಹೇಳದೇ ತಮ್ಮ ದಾರಿಯತ್ತ ತಿರುಗಿ ನಡೆದರು.

ಕಾರು ಹೊರಟು ಹತ್ತು ನಿಮಿಷಗಳೊಳಗೆ, ಹತ್ತಿರದ ಆಸ್ಪತ್ರೆ ತಲುಪಿತು. ರೋಗಿಯನ್ನು ಕೆಳಗಿಳಿಸಿ ಸ್ಟ್ರೆಚರ್‌ನಲ್ಲಿ ಒಳಗೊಯ್ಯುವಾಗಲೇ ಜೊತೆಗೆ ಬಂದ ಮುದುಕರು,

"ನಾನಿನ್ನು ಬರಲಾಪ್ಪ, ಸ್ವಲ್ಪ ಅರ್ಜೆಂಟ್ ಇದೆ ನಂಗೆ, 9 ಘಂಟೆಗೆಲ್ಲ ಟ್ರೈನ್ ಇದೆ, ನಾನು ಈಗ ಮನೆಗೆ ಹೋಗಿ, ನನ್ನಾಕೆಯನ್ನು ಕರ್ಕೊಂಡು ಸ್ಟೇಷನ್‌ಗೆ ಹೋಗ್ಬೇಕು. ರಿಸರ್ವೇಷನ್ ಮಾಡಿಸಿದ್ದೂ ಆಗಿದೆ" ಎಂದು ಓಡುತ್ತೋಡುತ್ತಾ ನಡೆದವರು ಹಿಂತಿರುಗಿ,

"ನೀವೂ ಅಷ್ಟೆ. ಡಾಕ್ಟರಿಗೆ ವಿಷಯ ತಿಳಿಸಿ, ಬಿಟ್ಟು ಹೊರಟುಬಿಡಿ, ಹುಡುಗನೇ ಹುಷಾರಾದ್ಮೇಲೆ ಎದ್ದು ಹೋಗುತ್ತಾನೆ. ಶ್ರೀಮಂತ ಹುಡುಗ ಅನಿಸುತ್ತೆ, ಆಮೇಲೆ ಅವನ್ಹತ್ರನೇ ಫೀಸ್ ವಸೂಲಿ ಮಾಡ್ಕೊಳ್ಳಿ" ಎಂದು ಮತ್ತೆ ಹೊರಬಾಗಿಲಿನತ್ತ ಓಡಿದರು.

"ಐವತ್ತರ ಗಡಿ ದಾಟಿದ ಗಂಡಸು ಪಾಪ, ಹೆಂಡತಿಯ ಊರಿಗೆ ಕಳಿಸುವ ಆತುರವಿದ್ದರೂ ಇಲ್ಲಿಯತನಕ ಬಂದಿದಾರೆ" ಎಂದುಕೊಳ್ಳುತ್ತಾ,

ನವದಂಪತಿಗಳು ಪರಸ್ಪರರ ಮುಖ ನೋಡಿಕೊಂಡು, ತಮ್ಮ ಮುಂದಿನ ಪ್ರಯಾಣದ ಬಗ್ಗೆ ಆ ಆತುರದಲ್ಲೂ ಮಾತನಾಡುತ್ತಾ, ಸ್ಟ್ರೆಚರ್‌ನ ಹಿಂದೆ ನಡೆದರು. ಅದರ ಮೇಲೆ ನಿರ್ಜೀವ ದೃಷ್ಟಿ ಇಟ್ಟು ಮಾತಾಡುತ್ತಿದ್ದವರ ದೃಷ್ಟಿಗೆ ಜೀವ ಬಂದಾಗ, ಒಮ್ಮೆಲೇ ಆಶ್ಚರ್ಯ, ರೋಗಿಯ ನರಳಾಟ ನಿಂತುಹೋಗಿದೆ, ನಿಶ್ಚಿಂತವಾಗಿ ಮಲಗಿರುವ ಮೈಯೊಳಗಿನ ಖಾಯಿಲೆ ಯಾವಾಗ ಇಳಿದುಹೋಯ್ತು?

ಮಣಿಕಟ್ಟಿಗೆ ಕೈ ಹಿಡಿದು ಎದೆಯ ಮೇಲೆ ಸ್ಟೆತೋಸ್ಕೋಪ್ ಇಟ್ಟ ವೈದ್ಯರ ಕಣ್ಣುಗಳಲ್ಲಿ ಧುತ್ತನೆ ಸುರಿದ ಅನುಮಾನ ಅವರ ಕಣ್ಣುಗಳನ್ನು ಕಿರಿದುಗೊಳಿಸಿ ದಯಾಕರನನ್ನು ಇರಿಯುವಂತೆ ನೋಡಿತು. ದಯಾಕರನ ಮನದಲ್ಲಿ ಭಯ, ಗಾಭರಿಗಳ ತಾಕಲಾಟ.

"ಏನಾಯ್ತು ಡಾಕ್ಟರ್?" ಆತುರದಿಂದ ಪ್ರಶ್ನಿಸಿದ.

"ಪ್ರಾಣ ಹೋಗಿದೆ"

"ಆ್ಞ ಹೇಗೆ? ಏನು ಖಾಯಿಲೆ ಅಂತ ಗೊತ್ತಾಗುತ್ತಾ ಡಾಕ್ಟ್ರೇ?" ನವ ಜೋಡಿಗಳು ಹೌಹಾರಿ ಕೇಳಿದರು, ಒಂದೇ ಬಾರಿಗೆ.

"ಅದೆಲ್ಲ ಇಷ್ಟು ಬೇಗ ಗೊತ್ತಾಗಲ್ಲ, ಕೂಲಂಕುಷ ಪರೀಕ್ಷೆ ಆಗ್ಬೇಕು ಅದಕ್ಕೆ"

"ಓ ಹೌದಾ, ಹಾಗಾದ್ರೆ ನಿಮ್ಮ ಡೆಡ್ ವಾರ್ಡ್‌ನಲ್ಲಿ ಹಾಕ್ಕೊಂಡ್ ಬಿಡ್ತೀರಾ ಸಾರ್, ಯಾರೋ ಏನೋ ಪಾಪ, ದಾರೀಲಿ ಬಿದ್ದಿದ್ದಾಂತ ಕರ್ಕೊಂಡ್ ಬಂದ್ವಿ"

"ಹೆಣಾನ ಆಸ್ಪತ್ರೆಗೆ ಯಾರು ಸೇರಿಸ್ಕೊಳ್ತಾರೆರೀ, ಇಲ್ಲಿಟ್ಟುಕೊಂಡ್ರೆ ಪೋಸ್ಟ್‌ಮಾರ್ಟಂ ಮಾಡ್ಬೇಕು, ಮಾಡ್ದೇ ಯಾರಿಗೂ ಬಾಡಿ ಕೊಡೋಲ್ಲ, ಅಕಸ್ಮಾತ್ ನ್ಯಾಚುರಲ್ ಡೆತ್ ಅಲ್ಲವಾಗಿದ್ರೆ, ಯು ವಿಲ್ ಬಿ ಹೆಲ್ಡ್ ರೆಸ್ಪಾನ್ಸಿಬಲ್ ಫಾರ್ ಹಿಸ್ ಡೆತ್, ನೀವು ಹೆಣಾನ ಇಲ್ಲೇ ಬಿಟ್ಟು ಪರಾರಿ ಆಗಿಬಿಟ್ರೆ, ಮುಂದೆ, ನಿಮ್ಮನ್ನ ಬಿಟ್ಟಿದ್ದು ಹೇಗೆ? ಯಾಕೆ? ಅಂತ ನನ್ಮೇಲೆ ದೋಷ ಹೊರಿಸ್ತಾರೆ. ಈಗ ಟೆಸ್ಟ್ ಮಾಡಿದ್ದಕ್ಕೆ 100 ರೂ. ಕೊಟ್ಟು

ಹೋಗ್ಬಿಡಿ. ಇವ್ನ ವಿಳಾಸ ಸಿಕ್ಕಿದೆ ಅಂದ್ರುಲ್ಲಾ ಅಲ್ಲಿಗೇ ತೊಗೊಂಡ್ಹೋಗಿ ಮುಟ್ಟಿಸಿಬಿಡಿ ಹೆಣಾನ್ನ"

ವಿಷಯವನ್ನು ಯಾವ ರೀತಿಯಲ್ಲೂ ಬೆಳೆಸಲಿಚ್ಛಿಸದೇ ಗಡರುವ ದನಿಯಲ್ಲಿ ಸಲಹೆ ನೀಡಿದ ವೈದ್ಯರು ಕೈ ಮುಂದೆ ಚಾಚಿದರು. ದಯಾಕರನಿಗೆ ಏನು ಮಾಡಲೂ ತೋಚದೆ ಹಿಂದೆ ಮುಂದೆ ನೋಡಿದ.

"ನೋಡಿ, ಇಲ್ಲಿ ಜಾಸ್ತಿ ಹೊತ್ತು ನಿಂತ್ರೆ ನಮ್ಗೂ ನಿಮ್ಗೂ ಇಬ್ರಿಗೂ ಕಷ್ಟ. ನಿಮ್ಮ ಮೇಲೆ ಅನುಮಾನ ಬರುತ್ತೆ ಎಲ್ರಿಗೂ ಸುಮ್ನೆ ನಮ್ಮ ಫೀಸ್ ಕೊಟ್ಟು, ಆ ಹೆಣದ ವಾರಸುದಾರರ ಹತ್ರ, ಈ ಹಣ ವಸೂಲು ಮಾಡ್ಕೊಳ್ಳಿ" ಎಂದರು ಅವರು.

ಈ ಸಲಹೆ ಸೂಕ್ತವೆನಿಸಿತು ದಯಾಕರನಿಗೆ. "ಅದೇ ಸರಿ, ದಾರೀಲಿ ಎಲ್ಲಾದ್ರು ಹಾಕಿ. ಯಾರ ಕಣ್ಣಿಗಾದ್ರೂ ಬಿದ್ದು, ಪೋಲೀಸರ ಅನುಮಾನಕ್ಕೆ ಆಹುತಿಯಾಗಿ, ಇಲ್ಲದ ರಂಪ ತಲೆ ಮೇಲೆ ಹೊರುವ ಸಂದರ್ಭ ಒದಗಿದರೆ? ನೂರು ರೂ. ಅವರು ಕೊಟ್ರೂ ಸರಿ, ಇಲ್ಲದಿದ್ರೆ ಇಲ್ಲ, ಯಾರೋ ಬಡಪಾಯಿಗೆ ಸಹಾಯ ಮಾಡ್ದೆ ಅಂದುಕೊಂಡ್ರೆ ಆಯ್ತು ಅಷ್ಟೆ. ಅವನಿಗೆ ಯಾವ ಖಾಯಿಲೆ ಇತ್ತು, ದಾರೀಲಿ ಯಾಕೆ ಬಿದ್ದಿರಬಹುದು ಅನ್ನೋದು ಅವನ ಮನೆಯವರಿಗೆ ಚೆನ್ನಾಗಿ ಗೊತ್ತಿರುತ್ತೆ. "ಸದ್ಯ ಎಲ್ಲೋ ಬಿದ್ದವನನ್ನು ಮನೆತನಕ ತರುವ ದೊಡ್ಡ ತೊಂದರೆ ತೊಗೊಳುವ ಪುಣ್ಯಾತ್ಮರು ಇನ್ನೂ ಇದ್ದಾರಲ್ಲಾ ಎಂದು ಖಂಡಿತಾ ಖುಷಿ ಪಡುತ್ತಾರೆ. ಯಾರಿಗಾದರೂ ಹಾಗೆ ಅನಿಸುವುದು ಸಹಜವೇ ತಾನೇ" ಜೋಡಿಗಳಿಬ್ಬರ ಬುದ್ಧಿಗಳೂ ಆಲೋಚಿಸಿದುವು. ಡಾಕ್ಟರ ಅಜ್ಞೆಯ ಮೇರೆಗೆ ಬಂದ 4 ಜವಾನರು, ಆ ಹೆಣವನ್ನು ದಯಾಕರನ ಕಾರಿನಲ್ಲಿ ತುರಿಸಿ ಮಲಗಿಸಿದರು. ಸ್ಟೀರಿಂಗ್ ಹಿಡಿಯಲು ಹೊರಟಾಗ, ಮುಂದಿದ್ದವ ಕೈ ಚಾಚಿದ 'ಸಾರ್' ಎನ್ನುತ್ತಾ ಓಹ್ ಅರ್ಥಮಾಡಿಕೊಂಡ ದಯಾಕರನ ಕೈ 5 ರೂ. ನ ನೋಟೊಂದನ್ನು ತೆಗೆದು ಅವನ ಕೈಲಿಟ್ಟಿತು. ನೋಟು ಪಡೆದ ಕೈ ಸಲಾಂ ಹಾಕಿ ಆಸ್ಪತ್ರೆಯೊಳಗೆ ಓಡಿ ಹೋಯಿತು.

"ಅವ್ನು ಒಬ್ನೇ ಅಲ್ಲಾ ಸಾರ್ ಹೊತ್ತಿದ್ದು ಅದ್ನ, ಅದೂ ಹೆಣಾ

ಸಾರ್, ನಾವು ತಂದು ಹಾಕಿದ್ದು ಮಜಬೂತಾದ ಹೆಣ" ಇನ್ನೊಬ್ಬ ಹೇಳಿದ.

ಅಪರಿಚಿತನಾವನದೋ ಹೆಣ. ಆದರೇನು? ಇವರೆಡುರಿಗೆ ಅದನ್ನೆಲ್ಲ ಹೇಳಿಕೊಳ್ಳಲಾಗುತ್ತದೆಯೇ? ಮಾತಾಡದೇ ತಲಾ 5 ರೂ. ನಂತೆ 15 ರೂ. ಕೊಟ್ಟು, ಕೃಷ್ಣಾ ನಗರದ ಕಡೆ ಕಾರು ಓಡಿಸಿದಾಗ ಎಡ ಪಕ್ಕದಲ್ಲಿ ಕೂತಿದ್ದ ಹೆಂಡತಿಯ ಮುಖದಲ್ಲಿ ಗಂಭೀರ ಮೌನ ಹರಡುತ್ತಿರುವುದನ್ನು ಅಷ್ಟೇ ಗಂಭೀರವಾಗಿ ಗಮನಿಸಿ ಮಾತಾಡದೇ ವಾಹನ ಓಡಿಸಿದ. ತಾವು ಮಾಡಿದ ಕೆಲಸ ತಾವು ತಿಳಿದಷ್ಟು ಹಗುರವಲ್ಲ, ಎಲ್ಲಿಯಾದರೂ ಗಂಭೀರ ತಿರುವು ತೆಗೆದುಕೊಂಡುಬಿಟ್ಟರೆ ಎನ್ನುವ ಭಯ ಇಬ್ಬರ ಮನಸ್ಸಿನ ಮೂಲೆಗಳಲ್ಲೂ ಸಣ್ಣಗೆ ಕಿರುಗುಟ್ಟಲು ತೊಡಗಿತ್ತೋ ಏನೋ, ಆದರೆ ತಂದಿರುವ ಹೆಣ ವನ್ನು ಎಲ್ಲಿ ಎಸೆಯಲೂ ಭಯ.

ಮೊದಲನೇ ಬ್ಲಾಕ್‌ನ ಸಂದುಗೊಂದುಗಳಲ್ಲಿ ವಿಚಾರಿಸಿ, ಕಾರು ತೂರಿಸಿ, ಮೈನ್ ರೋಡಿಗೆ ಬಂದರು. ಅಂತೂ, ಹಿಂದೆ ತೆಪ್ಪಗೆ ಸತ್ತು ಬಿದ್ದು ಇಷ್ಟೆಲ್ಲ ತೊಂದರೆ ಕೊಡುತ್ತಿರುವ ಆ ದೇಹಕ್ಕೆ ಮೊದಲಿನ ನೆಲೆ ಹುಡುಕಿದಾಗ ರಾತ್ರಿ 9.30. ಬೃಂದಾ ಟಾಕೀಸ್‌ನ ಹಿಂದಿನ 4ನೇ ಮೇನ್‌ನಲ್ಲಿ, ತಲೆ ಹೊರಗೆ ಹಾಕದೇ ಕಾರು ನಡೆಸಿದ್ದರೆ. ಆಗಲೇ ಮಹಿಮಾಪುರ ಸೇರಿ ಸಂತೋಷಪಡಬಹುದಾಗಿದ್ದಂಥ ಹೊತ್ತು. ಮುಂದೆ ಮನೆಗಳೇ ಕಾಣದೆ ಊರ ಕೊನೆಯ ರಸ್ತೆಯಲ್ಲಿದ್ದ ಕೊನೆಯ ಮನೆ. ಆ ಕಡೆ ನೋಡಿದರೆ ಒಂದೆಡೆ ಬರೀ ಗುಡ್ಡ. ನೋಡಲು ಅಂದವಾದ ಮನೆ. ಹೊರಗಿನ ಚಿಕ್ಕ ಕಾಂಪೌಂಡಿನಲ್ಲಿ ಮೆಟ್ಟಿಲವರೆಗೆ ಇದ್ದ 4 ಅಡಿ ಕಾಲುದಾರಿಯ ಅತ್ತಿತ್ತ ಸಾಲಾಗಿ ಬಗ್ಗಿ ಬೆಳೆದ ಚೆಂಡು ಹೂವಿನ ಗಿಡಗಳಿಗೆ ಮೈ ಸವರುತ್ತ ಮೆಟ್ಟಿಲು ಹತ್ತಿ, ಕರೆಗಂಟೆ ಒತ್ತಿದ ಅವನು.

"ಯಾರು?" ಕೋಮಲ ಧ್ವನಿಯೊಂದು ಒಳಗಿಂದ ಪ್ರಶ್ನಿಸಿತು.

"ಊ್ಹ, ಯಾರು ನಾನು? ಏನಂತ ಹೇಳೋದು?" ಅವನ ಯೋಚನೆ ಗೊಂದಲಿಸಿತು. "ನಾನು......" ಎಂದ ಏನೂ ಹೇಳಲು ತಿಳಿಯದೇ. "ಯಾರು" ಎಂದು ಅಭ್ಯಾಸ ಬಲದಿಂದ ಕೇಳಿದ್ದೋ ಅಥವಾ 'ನಾನು' ಎನ್ನುವ ಉತ್ತರವೇ ಸಮಾಧಾನ ನೀಡಿತೋ, ಅಂತೂ ಅವನ ಯೋಚನೆ

ಇನ್ನೂ ಗೊಂದಲದಲ್ಲಿರುವಾಗಲೇ ಬಾಗಿಲು ತೆರೆದುಕೊಂಡು ಒಳಗಿದ್ದ ಹರೆಯದ ಸುಂದರಿಯನ್ನು ಎದುರಿಗೆ ನಿಲ್ಲಿಸಿತು.

ಸಂಕೋಚ ಪ್ರವೃತ್ತಿಯ ಹುಡುಗ, ಹೆಣ್ಣುಗಳೊಡನೆ ಮಾತಾಡಲೇ ನಾಚುವ ಅವನು, ಈಗ ಹಣ ಬೇರೆ ಹೊತ್ತು ತಂದಿದ್ದಾನೆ, ಎದುರು ನಿಂತ ಅಪರಿಚಿತ ಯುವತಿಯನ್ನು ಕಂಡು ಸಂಪೂರ್ಣ ತಬ್ಬಿಬ್ಬಾಗಿಬಿಟ್ಟ. ಸತ್ತ ವಿಷಯದ ಸಂದೇಶ ತಂದ ಸಂಕೋಚಕ್ಕೋ, ಹೊಸ ಮುಖದೊಡನೆ ಮಾತಾಡುತ್ತಿರುವೆನೆಂಬ ಭಯಕ್ಕೋ ಪೂರ್ತಿ ಬೆವರಿ ಹೋದ.

"ನಾ . ನಾ...ನನ್ನ ಹೆಸರು ದಯಾಕರ" ಅಂತ ತಡವರಿಸುತ್ತಿರುವಾಗಲೇ,

"ಸರಿ ಏನು ಬೇಕಾಗಿತ್ತು?" ಎಂದು ಬಲ ಪಕ್ಕದಲ್ಲಿದ್ದ ಕೋಣೆಯಿಂದ ಹೊರಬಂದ ಗಡಸು ಧ್ವನಿಯೊಂದು ಕೇಳಿತು.

ದಯಾಕರ ಅತ್ತ ತಿರುಗಿದ. 6 ಅಡಿ ಎತ್ತರದ ಕಟ್ಟುಮಸ್ತಾದ ಆಜಾನುಬಾಹು. ಗಾತ್ರಕ್ಕೆ ಕಳೆ ನೀಡುವ ಗೋಧಿ ಬಣ್ಣದ ಮುಖ. ಸರಿ ವಯಸ್ಸು ಪ್ರದರ್ಶಿಸುವ ದಟ್ಟ ಕೂದಲುಳ್ಳ ವ್ಯಕ್ತಿ ಮುಂದೆ ಬಂತು.

"ಸುರೇಶ್ ಮುರುಕಿನ ಮನೆ ಎನ್ನುವವರು ಈ ಮನೆಯವರೇನು?" ಸ್ವಲ್ಪ ಸುಧಾರಿಸಿಕೊಂಡು ಕೇಳಿದ ದಯಾಕರ.

"ಆ್ಞ? ಸುರೇಶ ಮುರ್ಕಿನ ಮನೆ?" ಹುಬ್ಬು ಸಂಕುಚಿಸಿದ ಮುಖ. ಆಶ್ಚರ್ಯ. ಕುತೂಹಲ ಕಲೆಸಿಕೊಂಡಿತು" "ಯಾಕೆ? ಏನು ಬೇಕಿತ್ತು ಅವನಿಂದ ನಿಮಗೆ?" ಮತ್ತೆ ಮರುಪ್ರಶ್ನೆ ಬಂದಿತು ಆಜಾನುಬಾಹುವಿನ ಬಾಯಿಂದ.

"ಅವರು.......ನಿಮ್ಮ ಮಗನಾ......ಅವರಿಗೆ ಫಿಟ್ಸ್ ಏನಾದ್ರೂ ಬರ್ತಿತ್ತಾ?" ಹೇಗೆ ಕೇಳಬೇಕೋ ತಿಳಿಯದೇ ತೊದಲಿದ ದಯಾಕರ.

"ಏನಾಯ್ತೀಗ ಅವನಿಗೆ—" ? ಕುತುಹಲದಿಂದ ಕೇಳಿದ ಅಜಾನುಬಾಹು.

"ನೋಡಿ ಅವರು ಸುಶೀಲ ನಗರದ, 4ನೇ ಮೇನ್‌ನಲ್ಲಿ ಪ್ಯಾರಲಿಸಿಸ್ ಬಂದಿತ್ತಂತೆ. ಸರಳ್ತಾ ಬಿದ್ದಿದ್ರು—" ಉತ್ತರಕ್ಕೆ ಕಾಯದೇ ತನ್ನ ಹೇಳಿಕೆ ಆರಂಭಿಸಿತು. ಮೋಸ ಅರಿಯದ ಪ್ರಾಣಿ" ಏನಾಗಿತ್ತಂತ ಗೊತ್ತಿಲ್ಲ. ಅಡ್ರೆಸ್ ಹುಡುಕಿದಾಗ ಅವ್ರ ಪಾಕೆಟ್–ಡೈರಿಯಲ್ಲಿ ಈ ವಿಳಾಸ ಸಿಕ್ತು. ನಾವು ಒಂದಿಬ್ರು ಅವರ್ನ ಕಾರಿನಲ್ಲಿ ಮಲಗಿಸಿಕೊಂಡು ಆಸ್ಪತ್ರೆಗೆ ಕರ್‍ಕೊಂಡು ಹೋಗಿದ್ದು. ಅಲ್ಲಿಂದ ವಾಪಸ್–ಇಲ್ಲಿಗೆ...ಈ ಮನೆ ಹುಡು ಕ್ಕೊಂಡ್ ಬಂದೆ ನಾನು ನಂಜೊತೆ ಬಂದ ಇನ್ನೊಬ್ರು ಪಾಪ ಅವ್ರ ಹೆಂಡತಿಗೆ ಊರಿಗೆ ಕಳಿಸಬೇಕು ಅಂತ ಆತುರ ಪಟ್ಕೊಂಡ್ ಆಸ್ಪತ್ರೆಯಿಂದ ವಾಪಸ್ ಹೋದ್ರು, ಐ ಫೀಲ್ ವೆರಿ ಸಾರಿ ಟು ಟೆಲ್ ಯು ದಟ್ ಐ ಹ್ಯಾವ್ ಬ್ರಾಟ್ ದಿ ಬಾಡಿ ಆಫ್..." ಮುಂದೆ ಹೇಳಲಾರದೇ ನಿಂತ ದಯಾಕರ.

"ಆ್ಞ..." ಎದುರಿಗಿದ್ದ, ದಂಗು ಬಡಿದ ಮುಖಗಳೆರಡೂ ಬಾಯಿ ತೆರೆದು ನಿಂತವು.

"ಆ್ಞ...ನನ್ನ ಮಗ ಸುರೇಶನ ದೇಹವನ್ನೇ...?" ಷಾಕ್ ಆದ ಮುಖ ಚಹರೆ ಹೊತ್ತ ಅಜಾನುಬಾಹು ಕಣ್ಣು ಮುಚ್ಚಿ, ತುಟಿ ಕಚ್ಚಿ ನಿಂತು. ಒಂದು ಕ್ಷಣದ ನಂತರ ಕೇಳಿದ.

"ಏನು ? ಸುರೇಶ್‌ಗೆ ಏನಾಯ್ತು....ಅಯ್ಯೋ–" ತಂದೆಯ ಮಾತನ್ನು ಕತ್ತರಿಸಿ ಕಿರುಚಿದಳು, ಅಲ್ಲೇ ಇವರಿಬ್ಬರನ್ನು ನೋಡುತ್ತಾ ನಿಂತಿದ್ದ ಸುಂದರಿ ಅತೀವ ಶೋಕದಿಂದ.

"ನಾನ್‌ಸೆನ್ಸ್. ವಾಟ್ ದಿ ಹೆಲ್ ಯು ಆರ್ ಟೆಲ್ಲಿಂಗ್...ನನ್ಮಗಂಗೆ– ಏನು ಸುರೇಶನಿಗೆ ಫಿಟ್ಸ್ ಗಿಟ್ಸ್ ಏನೂ ಇರ್ಲಿಲ್ಲ. ಯಾರ್‍ರೀ ನೀವು" ಅಜಾನುಬಾಹು ದುಃಖದಲ್ಲಿ ಸಿಟ್ಟು ಬೆರೆಸಿ ಕಿರುಚಾಡತೊಡಗಿದ.

ದಯಾಕರ ಒಮ್ಮೆಲೇ ದಿಕ್ಕೆಟ್ಟು ನಿಂತ. ಕಾರಿನಲ್ಲಿಯೇ ಕೂತಿದ್ದ ದಯಾಕರನ ಹೆಂಡತಿ ಸುಮನಾ ಗಾಬರಿಯಿಂದ ಓಡೋಡಿ ಒಳಬಂದು ನಿಂತು ನೋಡಿದಳು. ಧಾಂಡಿಗನೊಬ್ಬನ ಅಬ್ಬರ, ಹುಡುಗಿಯೊಬ್ಬಳ ಅಳುವಿನ ಜೊತೆಗೆ ಆಗೋ ಒಳಗಿನಿಂದ ಇನ್ನಾರದೋ ವಿಕಾರ ಸ್ವರದ ನರಳಾಟ. ಏಳಲಾಗದೇ ಉರುಳಿ, ಮುಲುಗುತ್ತಿರುವ ಯಾವುದೋ ಹೆಂಗಸಿನ **ಸಂಕಟ**

ಪ್ರದರ್ಶನದ ಕೂಗು, ಸುರೇಶನ ಮರಣದ ವಾಸನೆ ಮೂಗಿಗೆ ತಗುಲಿದ ಕಾರಣವಿರಬೇಕು. ದಯಾಕರನ ಹೆಂಡತಿ ಒಳಬಂದವಳು ಸ್ತಂಭೀಭೂತಳಾಗಿ ನಿಂತಳು.

"ನಿಮ್ಮ ಮಗನ್ನ ಮನೆಯೊಳಕ್ಕೆ ತಂದಿಟ್ಟು. ನಾವು ಪಾಹಿಮಾಪುರಕ್ಕೆ ಹೋಗ್ಬೇಕು ಬನ್ನಿ ಸಾರ್", ಚೇತರಿಸಿಕೊಂಡ ಧೈರ್ಯದಲ್ಲಿ ನುಡಿದು ಹೊರ ಗಿಳಿದ ದಯಾಕರ. ಗೊಣಗುತ್ತಲೇ ಅವನನ್ನ ಹಿಂಬಾಲಿಸಿತು ಅಜಾನು ಬಾಹು.

ಕಿವಿಗೆ ಬಿದ್ದ ಕಿರುಚಾಟಕ್ಕೆ ಗೇಟಿನ ಬಳಿ ಬಂದು ಇಣುಕುತ್ತ ನಿಂತಿದ್ದ ಎದುರಿನ ಮತ್ತು ಎಡ ಪಕ್ಕದ ಮನೆಯವರೂ ಒಂದಿಬ್ಬರು ಅಲ್ಲಿ ಸೇರಿ ಸುರೇಶನ ಹೆಣವನ್ನು ಮನೆಯ ಅಂಗಳದಲ್ಲಿ ಇಳಿಸಿಕೊಂಡರು. ಹೆಣ ನೋಡಿ ಶಾಕ್ ಆದವನ ಹಾಗೆ ಸುಮ್ಮನೇ ಅದರ ಮುಂದೆ ಯೋಚಿಸುತ್ತಾ ಕುಳಿತುಬಿಟ್ಟ ದಾಂಡಿಗ ವ್ಯಕ್ತಿ. ಸುರೇಶನ ಅಕ್ಕನ ಅಳು ಪುನಃ ತಾರಕ ಕ್ಕೇರಿತು. ಪಕ್ಕದ ಮನೆಯ ಹೆಂಗಸೊಬ್ಬರಿಬ್ಬರು ಒಳಗೋಡಿದ್ದರು. ಅಲ್ಲಿ ಹೊರಳಾಡುತ್ತ ಮಲಗಿರುವ ಅರೆ ಸತ್ತ ಶರೀರಕ್ಕೆ ಸಮಾಧಾನ ಹೇಳಲೆಂದು ಓಡಿರಬೇಕು. ಹೊರಗೆ ಬಂದು ನಿಂತು. ತಮ್ಮ ತೀರಿ ಹೋದುದಕ್ಕೆ ಪ್ರಲಾಪಿಸುತ್ತಿರುವ ಅಕ್ಕನನ್ನು ಇನ್ನಾರೋ ಬೆನ್ನು ಸವರಿ ಸಂತವಿಸುತ್ತಿದ್ದಾರೆ. "ಬದಲಾಗದ ಆಗುಗಳನ್ನು ಮರೆಸಲು ಬಣ್ಣ ಬಳಿದ ನಿರುಪಯೋಗಿ ಮಾತು ಗಳ ಪ್ರಯತ್ನ, ಅವರ ಮನವನ್ನೇ ಮುಟ್ಟಲಾಗದ ತಣಿಸುವ ಪ್ರಯೋಗ ಗಳು", ಸುಮನಾ ಅಂದುಕೊಂಡಳು. ಎಲ್ಲ ಆಪ್ತರೋ ಅಥವಾ ಈಗ ಯಾರೋ ಸತ್ತಿದ್ದಾರೆ ಎನ್ನುವ ಕರುಣೆ, ಯಾರು, ಹೇಗೆ, ಎಂದು ನೋಡುವ ಕುತೂಹಲಕ್ಕೆ ಬಂದು, ಸಮಾಧಾನಿಸ ಹೊರಟಿದ್ದಾರೋ ಎಂದು ಸುಮನಾಗೆ ತಿಳಿಯದು.

ದಯಾಕರನತ್ತ ತಿರುಗಿ ನೋಡಿದಳು ಸುಮನಾ. ಸುಮ್ಮನೇ ನಿಂತು ಎಲ್ಲರನ್ನು ನೋಡುತ್ತಿದ್ದ ಅವನೂ ಅವಳನ್ನು ನೋಡಿದ ಕಡೆಗೆ, ಪರಸ್ಪರರ ಕಣ್ಣುಗಳು ಮಾತಾಡಿದುವು. ಚಿಕ್ಕ ಸಹಾಯ ಮಾಡಲು ಹೋಗಿ ಇದಾವ ಸ್ಮಶಾನ ಶೋಕದಲ್ಲಿ ಭಾಗಿಗಳಾಗುವ ಸಂಕಟ ಬಂತು ತಮಗೆ? ಇಂಥ

ಶೋಕ ಸಂದರ್ಭದಲ್ಲಿ ತಾವು ಖರ್ಚು ಮಾಡಿದ ಹಣದ ಬಗ್ಗೆ ಹೇಳಿ ಕೊಳ್ಳೋದು ಹೇಗೆ ? ಹೀಗೆ ಎಷ್ಟು ಹೋಗುತ್ತೋ ಇದಕ್ಯಾಕೆ ಲೆಕ್ಕ ? ಈಗ ಹೇಳಿ ಕೇಳಿ ಹೋಗಲಂತೂ ಸಾಧ್ಯವಿಲ್ಲ. ಅಳುವ ಬಾಯಿಗಳು ಕಿವಿಯ ವರೆಗೆ ಆಗಲಿಸಿ ಕೊಂಡಾಗ, ತಾವು ಹೇಳಿದ್ದು ಆ ಮುಚ್ಚಿದ ಕಿವಿಗಳಿಗೆ ಕೇಳು ವುದಾದರೂ ಎಲ್ಲಿ ? ಶವವನ್ನು ಸಂಬಂಧಿಸಿದವರಿಗೆ ಒಪ್ಪಿಸಿದ್ದಾಯಿತಲ್ಲ ? ಸತ್ತ ಮಗ ಎದುರಿಗೆ ಮಲಗಿರುವಾಗ ಅಪರಿಚಿತನೊಬ್ಬನ ಪರಿಚಯದ ಮಾತುಕತೆ ಯಾರಿಗೆ ಬೇಕು ? ಎಂದು ಯೋಚಿಸಿ ಮಾತಾಡಿಕೊಂಡವು ನವಪರಿಚಿತ ಮುಖಗಳು. ಇಬ್ಬರೂ ತಮ್ಮ ಪಾಡಿಗೆ ತಾವು ಕಾರಿನ ಬಳಿ ಬಂದರು. ಕಾರಿನ ಬಾಗಿಲು ತೆರೆದು ಒಳಕೂರಲು ಹೋದಾಗ, ಶವದ ಮುಂದೆ ಕೂತಿದ್ದ ಸುರೇಶನ ತಂದೆ ಓಡಿ ಬಂದ. ಪರಿಚಯ ಪಡೆಯಲೋ ಅಥವಾ ಬೀದಿ ಪಾಲಾಗಲಿದ್ದ ಶವವನ್ನು ಇಷ್ಟು ದೂರವಿರುವ ಮನೆಗೆ ತಂದೊಪ್ಪಿಸಿದ್ದಕ್ಕೆ ವಂದನೆ ಅರ್ಪಿಸಲೋ ಎಂದು ಊಹಿಸಿದ ದಯಾಕರ, ಮೊದಲೇ ಕೈ ಎತ್ತಿ ಮುಗುಳ್ನಕ್ಕ "ಪಾಪ ಇಂಥ ದುಃಖದ ಸಮಯದಲ್ಲೂ ಈ ಬಗ್ಗೆ ಕಾನ್‌ಷಿಯಸ್ ಇದ್ದಾನಲ್ಲಾ ಎಂದು ಮೆಚ್ಚುಗೆಯ ದನಿಯಲ್ಲಿ ಹೆಂಡತಿಗೆ ಪಿಸುಗುಟ್ಟಿ ಹೇಳಿದ.

ಊಹ್ಞೂ. ಆ ವ್ಯಕ್ತಿ ನಗಲೂ ಇಲ್ಲ, ವಂದನೆ ತಿಳಿಸಲೂ ಇಲ್ಲ. ದಯಾಕರನನ್ನು ಮೇಲಿನಿಂದ ಕೆಳಗಿನವರೆಗೆ, ತನ್ನ ಅನುಮಾನದ ದೃಷ್ಟಿ ಯನ್ನು ಹರಿತಗೊಳಿಸಿ, ನೋಡಿತು. "ವಯಸ್ಸಾದಂತೆ ಕಾಣುವ ಕಪ್ಪು ಶರೀರದ ಮೇಲೆ ಲಕ್ಷಣವಾದ ಮುಖ, ತಲೆಯ ಮಧ್ಯ ಕೂದಲು ಉದುರಿ ಅಲ್ಪ ಸ್ವಲ್ಪ ಕಾಣುವ ತಲೆ, ದುಬಾರಿ ಬಟ್ಟೆ ಧರಿಸಿದ್ದರೂ ಕಾರಿನ ಒಡೆಯ ನೆಂದು ಹೇಳಲಾಗದಂಥ ಎತ್ತರವಿಲ್ಲದ ತೀರ ಸಾಧಾರಣ ವ್ಯಕ್ತಿತ್ವ ಏನಪ್ಪಾ ಹೇಳ್ದೇ ಕೇಳ್ದೇ ಹೊರ್ಟು ಬಿಟ್ರೆ. ಕಾರು ಓಡಿಸಿಬಿಟ್ರೆ ಯಾರಿಂದ ಬೆನ್ನು ಹತ್ತಲಿಕ್ಕೆ ಸಾಧ್ಯ ಎನ್ನುವ ಜಂಭನಾ ? ಅಥ್ವಾ ಸತ್ತ ಮನೆಯಿಂದ ಓಡಿ ಹೋದ್ರೆ. ಆಳೋದು ಬಿಟ್ಟು ಯಾರು ಬರ್ತಾರೆ ಅನ್ನೋ ವಿಶ್ವಾಸಾನಾ ? ಏನಿಲ್ದೋರಿಗಿಂತ ಕಾರಿದ್ದೋರನ್ನ ಹಿಡಿಯೋದು ಸುಲಭ ಗೊತ್ತಾ ? ನಿಜ ಹೇಳು ನನ್ಮಗ ಏನ್ಮಾಡಿದ್ದ ನಿಂಗೆ. ಅವ್ನಿಂದ ಏನಾಗ್ಬೇಕಿತ್ತು" ?

ದಂಗಾಗಿ ಹೋದ ದಯಾಕರ. ಹಿಂದೆ ನಿಂತಿದ್ದ ಹೆಂಡತಿ ಸುಮನಾ ತಬ್ಬಿಬ್ಬಾಗಿ ಹೋದಳು. ಇದೇನು ಪ್ರಶ್ನೆ ಇದು ? ಯಾಕೆ ಈ ಸವಾಲು **ಈಗ** ? ಯೋಚಿಸಿ ಉತ್ತರಿಸುವ ಮೊದಲೇ ಅಜಾನುಬಾಹು ಮುಂದು ವರಿಸಿದ, ಒಂದು ಹೆಜ್ಜೆ ಮುಂದೆ ಬಂದು. "ಏಯ್ ಮಿಸ್ಟರ್, ನನ್ಮಗನ್ನ ನೀವೇ ಯಾಕೆ ಕೊಂದಿರಬಾರ್ದು ? ಹ್ಞ ಹ...ಪ್ಯಾರಲಿಸಿಸೋ, ಫಿಟ್ಸೋ ಅಂತೆ...ಮಲುಗ್ತಿದ್ದ ಅಂತೆ...ಅಹಾಹಾ...ಒಳ್ಳೇ ಐಡಿಯಾ...ಯಾರ ಮುಂದೆ ಕತೆ ಹೇಳ್ತೀರ್ರಿ ? ಕೊಂದ ಶವಾನ, ಈ ತಂದೆ ಕೈಲಿಟ್ಟು, ವಂದನೆ ಪಡೆದು, ಬಂಧನ ತಪ್ಪಿಸಿಕೊಳ್ಳೋ ಐಡಿಯಾ ? ಪ್ವಾರೆವ್ಹಾ ಕೊಡ್ಬೇಕು ನಿಮ್ಮ ತಲೆಗಳಿಗೆ".

ಲಂಬೋದರನ ಬಾಯಿ, ಅರ್ಥವತ್ತಾದ ಪ್ರಾಸಬದ್ಧ ಪದಗಳನ್ನು ಆ ಸಮಯದಲ್ಲೂ ಉಗುಳಿದ್ದು. ಅಕಸ್ಮಾತ್ ಉರುಳಿ ಬಂದಿದ್ದಿರಬಹುದೇ ? ಆದರೆ ಕೊಲೆಯ ಆಪಾದನೆ ತಮ್ಮ ಮೇಲೆ ? ಗಂಡ-ಹೆಂಡತಿಯರಿಬ್ಬರ ಮನಗಳೂ ಜಾಗ ಬಿಟ್ಟು ಹೊರಳಾಡಿ ಹೋದುವು ಒಂದೇ ಕ್ಷಣದಲ್ಲಿ.

"ಏನ್ ಸಾರ್ ಏನ್ ಬೊಗುಳ್ತಾ ಇದೀರಿ" ? ಮುಂಗೋಪಿ ದಯಾಕರನಲ್ಲಿ ಭುಗಿಲ್ಲೆಂದು ಹೊತ್ತಿದ ಸಿಟ್ಟು, ನಾಲಿಗೆಯಲ್ಲಿ ಚಕಮಕಿಸಿತು. "ಯಾವ್ದೋ ಮೂಲೆಯಲ್ಲಿ. ನಾಯಿ ಹಂದಿಗಳಿಗೆ ನೆಕ್ಕಲು ಬಿಡದೇ, ನಿಮ್ಮಗನ ಶವಾನ ಇಲ್ಲೀವರೆಗೆ ತರೋ ಕಷ್ಟ ತೊಗೊಂಡಿದ್ದಕ್ಕೆ ಇದೇನಾ ನಿಮ್ಮ ಬಹುಮಾನ ? ನಾನು, ನನ್ನವಳು ಹಾಯಾಗಿ ಮಹಿಮಾಪುರಕ್ಕೆ ಹೋಗೋ ದ್ಬಿಟ್ಟು, ಆಸ್ಪತ್ರೆಗೆ ಹೋಗಿ ಅಲ್ಲಿ ಡಾಕ್ಟರ್‌ಗೆ 100 ರೂ. ಹೆಣ ಹೊತ್ತು ಹಾಕ್ದೋರಿಗ 14 ರೂ ತೆತ್ತು, ಇಲ್ಲಿಯ ಮೂಲೆ ಮೂಲೆ ತಿರುಗಿ, ನಿಮ್ಮನೆ ಹುಡುಕೋ ಶ್ರಮ ತೊಗೊಂಡಿದ್ದಕ್ಕೆ ಅದೂ ಈ ಕತ್ಲಲ್ಲಿ, ಇದೇನಾ ನಿನ್ನ ವಂದನೆ ? ಥುತ್ ಮನುಷ್ಯತ್ವನೇ ಇಲ್ಲಿ ನಿಮ್ಗೆ. ನಿಮ್ಮಂಥೋರಿಗೆ ಮುಂದೆ ಧುಮ್ಮಿಕ್ಕಿದ ಸಿಟ್ಟಿನಲ್ಲಿ ಏನೂ ಹೇಳಲಾಗದೆ, ಏಕವಚನಕ್ಕಿಳಿದು, ಒದರಿ ಅರ್ಧಕ್ಕೆ ನಿಲ್ಲಿಸಿಬಿಟ್ಟ, ದಯಾಕರ.

"ಸಾಕಯ್ಯಾ ಬಾಯ್ಮುಚ್ಚು"...ಆಜಾನುಬಾಹು ದಯಾಕರನ ಏರಿದ ದನಿಯ ಕೂಗಾಟಕ್ಕೆ ಕತ್ತರಿ ಹಾಕಿ, ತನ್ನ ದನಿಯಲ್ಲಿ ಕಿರುಚಾಟ ಆರಂಭಿಸಿತು.

"ಬಹುಮಾನ ಅಂತೆ ಓಹೊಹೋ, ಬಹುಮಾನ, ನನ್ಮಗನ ಜೇಬಲ್ಲಿದ್ದ 10,000 ರೂ. ನೂ ಸಾಕಾಗಲಿಲ್ವಾ ನಿಂಗೆ ಬಡವಾ. ಇನ್ನೇನು ಆ ಹಣಕ್ಕಾಗಿಯೇ ಕೊಲೆ ಮಾಡಿದೀಯಾ. ನೋಡಿಬಿಡ್ತೀನಿ ತಾಳು, ಅವನ ಜೇಬಲ್ಲಿ ಅದು ಇದೆಯೋ ಇಲ್ಲವೋಂತ" ಎಂದು ಒಂದು ಹೆಜ್ಜೆ ಮುಂದಿಟ್ಟವ ಅಲ್ಲೇ ನಿಂತು ಹೆಣವನ್ನು ನೋಡುತ್ತಾ, "ಇಲ್ಲ ನಾನ್ ನೋಡಲ್ಲ. ಪೋಲೀಸರೇ ಬಂದು ನೋಡ್ಲಿ, ನೋಡಿ ಬರೆದ್ಕಳ್ಲಿ. ಆದ್ರೆ ನೀವಂತೂ ಖಂಡಿತಾ ಹಣ ತಿಂದಿರ್ತೀರಾ. ಪ್ರಾಣ ತಿಂದೆ, ಹಣ ಹೊಡ್ದೆ, ಇನ್ನೂ ಏನೋ ಬಹುಮಾನ ನಿಂಗೆ ? ಪೋಲೀಸ್‌ಗೆ ಕರೆಸಿ ನಿನ್ನ ಮೂಳೆ ಕಾಣಿಸೋ ಹಂಗ ಮಾಡಿದ್ರೆ ಕ್ಷಣದಲ್ಲಿ ಈಗಿರೋ ನಾಲಿಗೇನ ಬದಲಾಯ್ಸಿ ಹಾಕಿಬಿಡ್ತಾರೆ. ನಿನ್ನ ಹೊಸ ನಾಲಿಗೆ ನಿಜಾನ ಹೇಗೆ ಹೊರಳಿಸುತ್ತೆ ನೋಡ್ತೀರು" ಉದ್ದನೆ ವ್ಯಕ್ತಿಯು ನಾಲಿಗೆಯ ಮೇಲೆ ಬೈಗುಳಗಳ ಅರಳು ಪಟಪಟನೆ ಸಿಡಿಯುತ್ತಿತ್ತು.

ತೀರ ಒಳ್ಳೆಯ ಗುಣ ಬೆಳೆಸಿಕೊಂಡ, ನಿರುಪದ್ರವಿ ಸದ್ಗುಣಿಗಳಿಗೆ ಆಘಾತ ನೀಡುವ ಇನ್ನೊಂದು ಆಪಾದನೆ ? ದಯಾಕರ ಕೆರಳಿ ಕೂಗಾಡಿದ.

ಅಜಾನುಬಾಹುವಿನ ಹೆಸರು ರಾಘವಪ್ಪ ಮುಸುಕಿನಮನಿ. ಅವನ ಮಗಳು ರಾಣಿ, ಹೆಸರು ತಿಳಿಯದ, ಸದಾ ನರಳಾಡುತ್ತಿರುವ ಅವನ ಹೆಂಡತಿ, ಇವರನ್ನು ಮಾತ್ರ ಈಗ ಹತ್ತು ತಿಂಗಳಿಂದ ನೋಡತೊಡಗಿದ ನೆರೆಹೊರೆಯವರು, ಈಗ ಅವರ ಒಬ್ಬ ಮಗನನ್ನು ಶವದ ರೂಪದಲ್ಲಿ ಕಾಣುತ್ತಿದ್ದಾರೆ ಎನ್ನುವ ವಿಷಯ ಅಲ್ಲಿ ನೇರತೊಡಗಿದವರ ಲೊಚಗುಟ್ಟುವಿಕೆಯ ಪಿಸುಮಾತಿನಲ್ಲಿ ತಿಳಿದು ಬಂದಿತ್ತು, ದಯಾಕರ ಮತ್ತು ಸುಮನಾಗೆ.

ರಾಘವಪ್ಪ ಪೋಲೀಸರ ಹೆಸರೆತ್ತಿದಾಗಲೇ. ಮಗಳು ಫೋನ್ ಮಾಡಲೆಂದು ಒಳಗೋಡಿದ್ದಳು. "ನೋಡಿ ಫೋನ್ ಮಾಡಿ ತಿಳಿಸುವ ಮುನ್ನವೇ ನೀವು ಕೊಲೆ ಮಾಡಿದ್ದು ಹಣಕ್ಕಾಗಿ ಅಲ್ಲವೆ ಒಪ್ಕೊಂಬಿಡಿ. 10 000 ರೂ, ಹಣ ವಾಪಸ್ ಕೊಟ್ಟುಬಿಡು, ಮಗ ಸತ್ತಿದ್ದಂತೂ ಆಯ್ತು, ಹಣವಾದ್ರೂ ವಾಪಸ್ ಕೈಗೆ ಬಂದು ನಿನ್ನಿಂದಲೇ ನಿಜ ಗೊತ್ತಾದರೆ. ನಾನು ಪೋಲಿಸ್‌ಗೆ ತಿಳಿಸಿ ಇಲ್ಲದ ರಾಮಾಯಣಕ್ಕೆ ಎಡೆ ಮಾಡಿಕೊಡಲು ಬಿಡುವುದೇ ಇಲ್ಲ.

10,000 ರೂ. ವಾಪಸ್ ಕೊಟ್ಟುಬಿಡ್ತೀಯಾ"? ಕೇಳಿದ ರಾಘವಪ್ಪ ಮುಸುಕಿನ ಮನಿ.

"ಯಾವ 10,000 ರೂ, ? ಮೊದಲು ಜೇಬು ನೋಡ್ಬೇಕು. ನೋಡೋ ಮೊದ್ಲೇ ಇಷ್ಟೆಲ್ಲ ಹೇಳ್ತಿದೀರಾ ಅಂದ್ರೆ ಅದ್ರಲ್ಲಿ ಇಲ್ವೇ ಇಲ್ಲ ಅಂತ ಅರ್ಥ, ಅವನ ಜೇಬಿನಲ್ಲಿ ಪಾಕೆಟ್ ಡೈರಿ ಜೊತೆಗೆ ಇದ್ದದ್ದು ಬರೀ 20 ರೂಪಾಯಿ. ಅದು ಆ ಜೇಬಿನಲ್ಲೇ ಇದೆ, ನೀನು ಹೆಣದ ಮುಖವೂ ಸರಿಯಾಗಿ ನೋಡದೇ ಏನೇನೋ ಮಾತಾಡ್ಬೇಡ. ಹಾಗೆ ನೋಡಿದ್ರೆ, ದಾರಿಯಲ್ಲಿ ವೈದ್ಯರಿಗೆ ಕೊಟ್ಟ 100 ರೂ ರೂ. ಹೆಣ ಹೊತ್ತವರಿಗೆ ಕೊಟ್ಟ 20 ರೂ. ಈವರೆಗೆ ತಂದದ್ದಕ್ಕಾಗಿ ಆದ ಪೆಟ್ರೋಲ್ ಖರ್ಚಿನ ಹಣ, ನೀವೇ ನನಗೆ ವಾಪಸ್ ಕೊಡ್ಬೇಕು: ಅದು ಬಿಟ್ಟು ಬಾಯಿಗೆ ಬಂದ ಹಾಗೆ ಮಾತಾಡ್ತಾರೆ ಎಂದ " ದಯಾಕರ ಸಿಟ್ಟಿನಿಂದ ಒದರಿದ.

"ಸರಿ ಪೋಲೀಸರ ಮೂಲಕನೇ 35,000 ಕಕ್ಕಿಸೋ ಹಾಗೆ ಮಾಡ್ತೀನಿ, ನಿನ್ನಿಂದ ನೀನೇ ಕೊಲೆ ಮಾಡಿದ್ದೂಂತ" ಎಂದ ರಾಘವಪ್ಪ ಮುಸುಕಿನಮನಿ. "ರಾಣಿ ಪೋಲಿಸ್‌ಗೆ ಫೋನ್ ಮಾಡಿಬಿಡಮ್ಮ". ಎಂದು ನಿಂತಲ್ಲಿಂದಲೇ ಕೂಗಿ ಹೇಳಿದ, ಮನೆಯ ಬಾಗಿಲಲ್ಲೇ. ಓಡಿ ಹೋಗಿ ನಿಂತು ಇವರ ಮಾತುಗಳನ್ನು ಬಿಕ್ಕುತ್ತಲೇ ಕೇಳಿಸಿ ಕೊಳ್ಳುತ್ತಿದ್ದ ರಾಣಿ. ಸೂಚನೆ ಪಡದದ್ದೇ ತಡ, ಫೋನ್ ಕೈಗೆತ್ತಿ, ಪೋಲೀಸ್ ಸ್ಟೇಷನ್‌ಗೆ ವಿಷಯ ಮುಟ್ಟಿಸಿದಳು. ಎಷ್ಟೇ ಹೇಳಿದರೂ, ಯಾವ ರೀತಿ ತಿಳಿಸಿದರೂ; ರಾಘವಪ್ಪ ಹೊಸ ಜೋಡಿಗಳನ್ನು ಅಲ್ಲಿಂದ ಕಾಲು ಸರಿಸಲು ಬಿಡಲಿಲ್ಲ. ಕಾಲು ಘಂಟೆಯೊಳಗೆ ಪೋಲೀಸ್ ಇನ್ಸ್‌ಪೆಕ್ಟರೊಂದಿಗೆ, ನಾಲ್ವರು ಪೋಲೀಸರು ಅಸಿಸ್ಟೆಂಟ್ ಪೋಲೀಸ್ ಆಫೀಸರು ಜೀಪಿನಲ್ಲಿ ಬಂದಿಳಿದರು.

ಪೋಲಿಸರ ಆಗಮನ, ನಡೆದಿದ್ದ ನೀರಸ ಘಟನೆಗೆ ಗಂಭೀರ ಅರ್ಥ ಮೂಡಿಸಿ, ಘಟನೆಯನ್ನು ಇನ್ನೂ ಆಳಕ್ಕಿಳಿಸತೊಡಗಿತು. ಪೋಲಿಸ್ ಇನ್ಸ್‌ಪೆಕ್ಟರ್ ಶೇಖರ್‌ರವರು ತನಿಖೆಗಾಗಿ ಬಂದವರಲ್ಲಿ ಮುಖಂಡರು. ಅವರೇ ವಿಚಾರಣೆ ಆರಂಭಿಸಿದರು. ಯಾವ ಪೋಲೀಸ್ ಇನ್ಸ್‌ಪೆಕ್ಟರ್ ಎನ್ನುವುದು ದಯಾಕರನಿಗಾಗಲೀ ತಿಳಿಯದು. ತಿಳಿಯುವ ಆಸಕ್ತಿಯೂ

ಇರಲಿಲ್ಲ ; ಹುಟ್ಟಲೂ ಇಲ್ಲ. ಆ ಜೀಪು, ಆ ಪೇದೆಗಳು. ಆ ಸಮವಸ್ತ್ರ. ಅವರು ಪೋಲೀಸ್ ಇಲಾಖೆಯವರು ಎನ್ನುವುದನ್ನು ಸ್ಪಷ್ಟಪಡಿಸಿತಷ್ಟೆ.

ಬಂದವರೇ ಅವರು ಕೇಳಿದ ಮೊದಲ ಪ್ರಶ್ನೆ, "ಹೆಣ ಎಲ್ಲಿತ್ತು ? ಯಾಕೆ: ಯಾರು ಕಾರಿನಿಂದಿಳಿಸಿದ್ದು"? ಎಂದು.

"ನೋಡಿ ಈ ಈತನೇ ಆತುರಪಡಿಸಿ ಕೆಳಗಿಳಿಸಿಬಿಟ್ಟ ನಮಗೆ ಯೋಚನೆಗೆ ಅಸ್ಪದವೇ ಕೊಡಲಿಲ್ಲ, ಅವನ ಆತುರಕ್ಕೆ ನಾವೆಲ್ಲ ಕೈ ನೀಡಿದ ವಷ್ಟೆ. ನಮಗೆ ಏನೂ ತೋಚಲಿಲ್ಲ ಆಗ" ರಾಘವಪ್ಪ ತಟ್ಟನೇ ಹೇಳಿದ.

"ನಾವು ಮಹಿಮಾಪುರಕ್ಕೆ ಹೊರಟೋರು ಸಾರ್. ಬೇಗ ಇವರ ಮಗನ ಶವವನ್ನ ಇವರಿಗೆ ತಲುಪಿಸಿ ಹೋಗೋಣ ಅಂದುಕೊಂಡು, ಅವರಿಗೂ ಹೇಳಿ ಕೆಳಗಿಳಿಸಿದ್ದು. ಅವರ ಸಹಾಯದಿಂದಲೇ ಇಳಿಸಿದ್ದು ದಯಾಕರ ನಮ್ರತೆಯಿಂದ ನಿವೇದಿಸಿದ.

ಸುಮಾಳ ತಲೆ ಗಿರಿಗಿಟ್ಟಲೆಯಾಗಿ ಬದಲುಗೊಳ್ಳ ತೊಡಗಿತ್ತು. ಕೆಲವು ಸಲ ಹೆಂಗಸರ ಸಲಹೆ, ಇಲ್ಲದ ರಾಮಾಯಣಕ್ಕೆ ದಾರಿ ತೋರಿಸುತ್ತದೆಯೋ ಏನೋ ? ಮರುಕ, ದಯೆ, ಮನುಷ್ಯನ ಹೇಡಿತನದ ಒಂದು ಚಿಪ್ಪೆಯೋ ಏನೋ ? ಯಾವನಾದರೆ ಏನು ? ತಾವು ಆ ಹುಡುಗನು ರಸ್ತೆಯಲ್ಲಿ ಬಿದ್ದು ಮುಲುಗುವ ಆ ದಮನೀಯ ಸ್ಥಿತಿಗೆ ಮರುಗಿದ್ದೇ ತಮ್ಮದೊಂದು ಸೋಲೇ ? ತಮ್ಮ ಪಾಡಿಗೆ ತಾವು ಆರಾಮಾಗಿ ಕಳೆಯಬೇಕಾಗಿದ್ದ ಈ ರಾತ್ರಿಯ ವೇಳೆಯಲ್ಲಿ ಇದೀಗ ಕೊಲೆಯ ಆಪಾದನೆ ತಮ್ಮ ಮೇಲೆ ? ಸಹೃದಯತೆಯ ಬೆಲೆ ಎಷ್ಟು ಕನಿಷ್ಠ ? ಉಪಕಾರಕ್ಕೆ ಇದೆಂತ ಕೃತಜ್ಞತೆ ? ನಡೆದದ್ದೆಲ್ಲ ಸತ್ಯ. ಆದರೆ ಈ ಸತ್ಯಕ್ಕೆ ಪುರಾವೆ ಎಲ್ಲಿದೆ ? ದಯಾಕರ ಏನೇ ಹೇಳಲಿ ಅದು ಸುಳ್ಳು ಎಂದರೆ ? ತಾನು ತನ್ನ ಮಾತಿನಲ್ಲಿ ಅವನ ಮಾತನ್ನು ಎಷ್ಟೇ ಸಮರ್ಥಿಸಲಿ, ಇದೆಲ್ಲಾ ಸುಳ್ಳು ಎಂದೇ ಹೇಳಿದರೇ ತಮ್ಮನ್ನು ಹೊಡೆದು ಹಾಕಿದರೆ—ಓ ದೇವರೇ—ಸುಮಾನಗೆ ಮುಂದೆ ಯೋಚಿಸ ಲಾಗಲಿಲ್ಲ. ಹೊಟ್ಟೆಯೊಳಗೆ ಉರುಳುತ್ತಿರುವ ಸಂಕಟವನ್ನು ತಡೆಯ ಲಾಗದೇ ಕಾರಿನೊಳಗೆ ತೂರಿ, ಸೀಟಿನ ಮೇಲೆ ಉರುಳಿಕೊಂಡಳು ಅವಳು.

"ಇವ್ನೇ ಕೊಂದಿರೋದೂಂತ ಸಾಬೀತು ಮಾಡೋಕೆ ಇವರಿಬ್ಬರ ನಡತೆಯೇ ಸಾಕು. ಸುರೇಶ ನರಳ್ತಾ ಬಿದ್ದಾಗ, ಏನಿಲ್ಲಾಂದ್ರೂ 4 ಜನರಾದ್ರೂ ಸೇರಿರೋಲ್ವಾ ? ಸೇರೇ ಸೇರಿರ್ತಾರೆ. ಅದೂ ಮನ್ಮಥನಂಥ ಈ ಹುಡುಗನ್ನ ಕರುಣೆಯಿಂದ ನೋಡಿಯಾದ್ರೂ, ನೋಡ್ತಾರೆ ನಿಂತು. ಎಲ್ಲಾ ಸೇರಿ ಹೆಣ ಕಾರೊಳಕ್ಕೆ ತುಂಬಿದ್ರು ಅಂತಾರಲ್ಲ. ಅದ್ರಲ್ಲಿ ಒಬ್ಬ ನಾದ್ರೂ ಇವ್ನ ಜೊತೆಗೆ ಇಲ್ಲಿಗೆ ಬರಲ್ವಾ ? ಅದೂ ಕಾರಲ್ಲಿ, ಆಟೋನಲ್ಲಲ್ಲ, ಜಾಗ ಇರಲಿಲ್ಲ ಎನ್ನುವಂತಿಲ್ಲ, ಇನ್ನೂ ಕೇಳಿ, ಆಮೇಲೆ, ಇಲ್ಲಿ ನಮ್ಮನೆ ಬಾಗಿಲು ತೆಗೆದ ನನ್ನ ಮಗಳೊಡನೆ ಸುಳ್ಳು ಮಾತು ಶುರು ಮಾಡೋಕೆ ಆಗ್ದೇ. ನಾ....ನಾ....ನನ್ನ ಹೆಸ್ರು ಅಂತ ಹೆದರಿ ತೊದಲಿದ. ಹೆಣ ಹೊತ್ತು ಹಾಕಿ, ಹೇಳ್ದೇ ಕೇಳ್ದೇ ಹೆಂಡ್ತೀನ ಹಿಡ್ಕೊಂಡ್ ಹಾರೋಕೆ ಹೊರಟ"

"ಇನ್ನೊಂದು, ಯಾವ ಬೇವಕೂಫನೂ, ಅದರಲ್ಲೂ, ಕಾರಿರುವಷ್ಟು ಅನುಕೂಲವಿದ್ದವರು ಯಾರೂ ಇಂಥ ಸಹಾಯಕ್ಕೆ ಕೈ ಹಾಕಲ್ಲ. ಪೆಟ್ರೋಲ್ ಖರ್ಚು ಮಾಡ್ಕೊಂಡು ಹೆಣಾನ ಮನೆಗೆ ತಲುಪಿಸೋ ಸಹಾಯ ಮಾಡೋಂಥ ಜಾಣ್ತನವೂ ತೋರಿಸಲ್ಲ. ಇವ್ನು ತಾನೇ ಕೊಲೆ ಮಾಡಿದ್ದಕ್ಕೆ ಅದು ಗೊತ್ತಾಗಬಾರ್ದೂಂತ, ಕೊಲೆಯ ಮೇಲೆ ದಯೆ, ಉಪಕಾರಗಳ ಹೊದಿಕೆ ಹೊದಿಸಿ 14 ಕಿ. ಮಿ., ದೂರದಿಂದ ಇಲ್ಲೀತನಕ ತಂದಿದ್ದಾನೆ ಅಷ್ಟೆ. ಈಗ ನೋಡಿ ಬಾಯಿ ಸತ್ತೋದ್ದಂಗೆ ಬೆಪ್ಪಾಗಿ ನಿಂತಿದಾನೆ. ಅಲ್ಲಿ ಆ ಹೆಂಡ್ತಿ ನಡುಗ್ತಾ ಬಿದ್ದಿರೋದು ನೋಡಿದ್ರೆ ಗೊತ್ತಾಗೋಲ್ವೆ ? ತಾವು ಸಿಕ್ಕಿ ಹಾಕ್ಕೊಂಡ್ ಬಿಟ್ವಲ್ಲಾ ಅನ್ನೋ ಭಯ, ಮೈ ಎರಿದೆ, ಅಂತ, ಏನ್ ನೋಡ್ತೀರ್ರೀ ಪೋಲೀಸರೇ ಹಿಡ್ದು ಹಾಕಿ ಇವರಿಬ್ಬರನ್ನೂ" ಉಸಿರು ಕಟ್ಟಿ ಬೈದಾಡಿದವ ತಾನೇ ಪೋಲೀಸ್ ಆಫೀಸರ್‌ಗೆ ಆಜ್ಞೆ ನೀಡಿದ, ಯಾರಿಗೂ ಮಾತಾಡಲೂ ಅವಕಾಶ ಕೊಡದೇ ಇಷ್ಟು ಹೊತ್ತು ಕೂಗಾಡಿ ಆಮೇಲೆ ತಣ್ಣಗೆ ನಿಂತುಬಿಟ್ಟ:

ರಾಘವಪ್ಪನ ಹೇಳಿಕೆ ಪಡೆದು, ಆಮೇಲೂ ಕಿವಿಯೊಳಗೆ ತೂರುತ್ತಿದ್ದ

ಅವನ ಆವೇಶದ ಮಾತುಗಳೆಲ್ಲವನ್ನೂ ಹೀರಿಕೊಳ್ಳುತ್ತಲೇ, ತಮ್ಮ ಪಾಡಿಗೆ ತಾವು ಶವದ ಮೇಲೆ ದೃಷ್ಟಿ ಆಡಿಸುತ್ತ, ಕೊಲೆ ಅಥವಾ ಅಪಘಾತದ ಮೂಲಕ ಸತ್ತಿರಬಹುದೆಂದು ತೋರುವ ಗುರುತುಗಳೇನಾದರೂ ಇವೆಯೇ ಎಂದು ಗಮನಿಸುತ್ತಿದ್ದ ಪಿ. ಐ. ಮಗನನ್ನು ಕಳೆದುಕೊಂಡವನ ಆರ್ಭಟದ ಅಜ್ಞಾಪನೆಗೆ ಬೆಚ್ಚಿ ತಿರುಗಿದರು. ಮತ್ತೆ ಶವದ ಕಡೆ ನೋಡುತ್ತಾ ಗಂಭೀರ ವಾಗಿ ಹೇಳಿದರು. ರಾಘವಪ್ನೋರೇ ನೀವು ಸ್ವಲ್ಪ ಸುಮ್ನೆ ಇರ್ತೀರಾ ? ಯಾವಾಗ ಯಾರ್ನ ಅರೆಸ್ಟ್ ಮಾಡ್ಬೇಕು ಅನ್ನೋದು ನಮಗೆ ಗೊತ್ತಿದೆ, ನಿಮಗೆ ಕೇಳಿದಾಗ, ಏನು ತಿಳಿದಿದೆಯೋ ಅಷ್ಟು ಹೇಳಿ ಸಾಕು", ಎಂದು ಹೇಳಿ ದಯಾಕರನ ಬಳಿ ಬಂದು ಸಮಾಧಾನವಾಗಿ, "ನಿಮ್ಮ ಹೇಳಿಕೆ ಏನು ಹೇಳಿ, ಇವರ ಮಗ ಸತ್ತಿದ್ದು ಹೇಗೆ ? ಇವ್ನ ಜೇಬ್ನಲ್ಲಿ ನಿಜವಾಗ್ಲೂ 10,000 ರೂ. ಇತ್ತಾ ? ಈಗಂತೂ ಯಾವ ಜೇಬಲ್ಲೂ ಆ ದುಡ್ಡು ಇಲ್ಲ. 2 ಹತ್ತರ ನೋಟುಗಳಿವೆ ಅಷ್ಟೆ, ಏನಾಯ್ತು ಹೇಳಿ" ಎಂದರು,

ದಯಾಕರ ಆರಂಬಿಸಿದ, "ನೋಡಿ ಸಾರ್ ನನ್ನ ಹೆಸರು ದಯಾಕರ, ಈಕೆ ನನ್ನ ಹೆಂಡತಿ ಸುಮನಾ. ಈಗ 15 ದಿನಗಳ ಹಿಂದಷ್ಟೇ ನಮ್ಮ ಮದುವೆಯಾಗಿದ್ದು ಮೊನ್ನೆ ನನ್ನ ದೊಡ್ಡಪ್ಪನ ಮಗನ ಮದುವೆ ಇದ್ದುದ ರಿಂದ ಅದನ್ನು ಮುಗಿಸಿಕೊಂಡು ನೋಡಬೇಕಾದ ಊರುಗಳಿಗೆಲ್ಲ ಹೋಗೋದು ಅಂತ ಪ್ಲಾನ್ ಹಾಕಿದ್ವಿ ಮೊದಲೇ, ಅದಕ್ಕೇ ಇವೊತ್ತು ಮಹಿಮಾಪುರಕ್ಕೆ ಹೊರ್ಟಿದ್ದು. ಈ ಕಾರು ನನ್ನದಲ್ಲ, ಕಾರು ಕಂಡು, ನನ್ನ ಶ್ರೀಮಂತ ಎಂದುಕೊಂಡಿದ್ದಾರೆ ಇವರು. ಕಾರು ನಂದೇ ಅಂದ್ಕೊಂಡಿ ದ್ದಾರೆ. ಇದು ಮೊನ್ನೆ ಮದುವೆಯಾದ ನನ್ನ ದೊಡ್ಡಪ್ಪನ ಮಗನದು. ಇದನ್ನು ಟ್ಯಾಕ್ಸಿ ಮಾಡಿ ಓಡಿಸ್ತಿದಾನೆ. ನಿನ್ನೆ ಇಲ್ಲಿಗೆ ಬಂದಿದ್ದ, ಇಲ್ಲಿಂದ ಬೈ ಫ್ಲೈಟ್ ಡೆಲ್ಲಿಗೆ ಹೋಗಿದ್ದಾನೆ. ನಾನು ಮಾಹಿಮಾಪುರಕ್ಕೆ, ಅವರ ಮನೆಗೆ ಹೋಗಲೇಬೇಕಾದ ಕೆಲಸ ಇದೆ. ಅದು ಅವನಿಗೂ ಗೊತ್ತು, ಆದ್ದರಿಂದ್ಲೇ ನಾವಿಬ್ರೂ ಈ ಕಾರ್ನಲ್ಲೇ ಮಹಿಮಾಪುರಕ್ಕೆ ಹೋಗಬಹು ದೆಂದೂ ಅವರ ಮನೇಲಿ ಈ ಕಾರು ಬಿಟ್ಟು ಊಟಿಗೆ ಹೊರಡಬಹುದೆಂದೂ ಹೇಳಿ, ಕಾರು ಬಿಟ್ಟು ಹೋದ. ಒಂದೇ ಮನೆಯವರಾದ್ದರಿಂದ,

ಮೊದಲೆಲ್ಲ ನಾವುಗಳು ಒಟ್ಟಿಗೆ ಇದ್ದುದರಿಂದ, ನಾವೂ ಅವರ ಕಾರನ್ನು ನಮಗೆ ಬೇಕಾದಾಗ ಕೇಳಿ ಬಳಸಿಕೊಳ್ಳೋದುಂಟು.

ನಾವು ಮಹಿಮಾಪುರದಿಂದ ಮುಂದೆ ಊಟಿಗೆ ಹೋಗ್ತೀವಿ. ಅಲ್ಲಿಂದ ಮದರಾಸಿಗೆ, ಮದರಾಸಿನಲ್ಲಿ ನನ್ನ ಸ್ನೇಹಿತ ಇದ್ದಾನೆ, ಅವನನ್ನೊಮ್ಮೆ ನೋಡಿಕೊಂಡು, ಅಲ್ಲಿಂದ ಡೆಲ್ಲಿ, ಕಾಶ್ಮೀರಗಳನ್ನು ನೋಡಿ ಬರಲು ಹೊರಟಿದ್ದೇವೆ. ಎಲ್ಲಾ ಕಡೆಗೆ ಟ್ರೈನ್ ಟಿಕೆಟ್ಸ್ ಹಾಗೂ ಲಾಡ್ಜಿಂಗ್ಸನಲ್ಲಿ ರೂಮ್ ಬುಕ್ ಮಾಡಿಸಿದ್ದೇನೆ. ನನ್ನ ಸ್ನೇಹಿತರ ಮೂಲಕ. ಅಲ್ಲಿಗೆಲ್ಲ ಹೋಗಲೆಂದು ಒಂದು ತಿಂಗಳ ರಜೆ ಹಾಕಿ ಎಲ್. ಟಿ. ಸಿ. ಪಡೆದಿದ್ದೇನೆ. ಅಂದ ಅಂದ ಹಾಗೆ ಹೇಳಲು ಮರೆತೆ, ನಾನು ಖಾಸಗಿ ಬ್ಯಾಂಕೊಂದರಲ್ಲಿ ಆಫೀಸರ್ ಆಗಿದ್ದೇನೆ. ಮಾರುತಿ ಗುಡ್ಡದ ಹಿಂದೆಯೇ ನಮ್ಮ ಸ್ವಂತ ಮನೆ ಇದೆ, ನಮ್ಮ ತಂದೆ-ತಾಯಿಗೆ ನಾನೂ ಒಬ್ಬನೇ ಮಗ, ಶಿರಾ ಹತ್ತಿರವಿರುವ ಹಳ್ಳಿಯೊಂದರಲ್ಲಿ ನಮ್ಮ ಹೊಲ, ಮನೆಗಳಿವೆ, ಇಷ್ಟೆಲ್ಲ ಇದ್ದೂ ನಂಗೇಕೆ ಬೇಕು ಈ ಇವರ ಮಗನ ಪಡಪೋಶಿ 10,000 ರೂ. ? ಇದೆ ಅಂತ ಬೇಡ ಅಲ್ಲ, ಏನೂ ಇಲ್ಲದಿದ್ದರೂ. ನಾವು ಮೊದಲಿನಿಂದಲೂ ಇನ್ನೊಬ್ಬರ ಕೈ ಮೇಲೆ ಕೈ ಇಡುವ ದಾನಿಗಳೇ ಹೊರತು, ಬೇರೊಬ್ಬರ ಕೆಳಗೆ ನಿಂತು ಕೈ ಚಾಚುವವರಲ್ಲ. ಏನೋ ಪಾಪ ಅಂತ ದಾರೀಲಿ ಬಿದ್ದವನನ್ನು ನಮ್ಮ ಕಾರಲ್ಲಿ ಮಲಗಿಸಿಕೊಂಡದ್ದೇ ತಪ್ಪಾಯ್ತು ನೋಡಿ, ಇವೊತ್ತು ರಾತ್ರಿ 7 1/4 ಘಂಟೆಗೆ ಮನೆ ಬಿಟ್ಟು ಮಹಿಮಾಪುರಕ್ಕೆಂದು ಹೊರಟ ನಮಗೆ, ಸುಶೀಲ ನಗರದ 5ನೇ ಬ್ಲಾಕ್‌ನ, 4ನೇ ಮೈನ್‌ನಲ್ಲಿ ಈ ಹುಡುಗ ಮಲಗಿದ್ದು ಕಾಣಿಸಿತು. ಅಲ್ಲಿ 4 ಜನ ಇದ್ರು—" ಎಂದು ಮುಂದೆ ನಡೆದದ್ದೆಲ್ಲದನ್ನೂ ದಯಾಕರ ಕೂಲಂಕುಶವಾಗಿ ವಿವರಿಸುವಾಗ, ಸುಮಾನೂ ಎದ್ದು ಬಂದು, ಸಣ್ಣಗೆ ನಡುಗುವ ತನ್ನ ದನಿಯನ್ನೂ ಸೇರಿಸಿದಳು. "ನಮ್ಮ ಅಕ್ಕನ ಮಗ ರಾಜೂ ಹಾಗೇ ಇವನೂ ಅಂತ, ಒಂದು ಮಾತು ನಾನು ಹೇಳಿದ್ದಕ್ಕೇ ಇಷ್ಟೆಲ್ಲಾ ಆಯ್ತು, ನಾವು ಮರ್ಯಾದೆಗೆ ತುಂಬಾ ಬೆಲೆ ಕೊಡುವ ಜನ. ಈ ಕೋರ್ಟು, ಕಳ್ಳತನ, ಕೊಲೆ ಇದೆಲ್ಲಾ ಮಾಡೋದು, ಓಡಾಡೋದಿರಲಿ, ಹೆಂಗಸರು ಮನೆಯಿಂದ ಹೊರಗೆ ಹೋದರೇ ಮಾರ್ಯಾದೆ ಕಡಿಮೆ ಆಗುತ್ತೆ

ಅಂತ ಅಳತೆ ಮಾಡಿ, ಏನೇನೋ ಲೆಕ್ಕ ಹಾಕಿ, ನಮ್ಮ ಮನೇಲಿ, ನಮಗೆ ಓದಿದ್ದಾದ ಮೇಲೆ ಕೆಲಸಕ್ಕೆ ಕೂಡ ಕಳಿಸಿಲ್ಲ."

ಅಲ್ಲಿ ನಿಂತ ಪೋಲೀಸರು ಪಿ, ಐ. ಅವಳನ್ನೇ ನೋಡಿದರು. ದಯಾಕರನಿಗೆ ಸರಿಯಾದ ಜೋಡಿ. ಅದೇ ಕಪ್ಪು ಬಣ್ಣ, ಗಿಡ್ಡಗಿರುವ ತೆಳ್ಳನೆಯ ದೇಹ, ತೆಳುವಾದ ಕಪ್ಪು ಕೂದಲಿಗೆ ಎಣ್ಣೆಯ ಹೊಳಪು. ಲಕ್ಷಣವಾದ ಮುಖಮುದ್ರೆ. ಏನೂ ಮಾಡದೇ ಹೆದರಿರುವ ಹುಡುಗಿ ಹೇಳುತ್ತಿರುವುದು ಸತ್ಯವೇ ಇರಬಹುದೆನಿಸಿದರೂ, ಇಂಥ ಹಲವಾರು ಪ್ರಕರಣಗಳನ್ನು ಕಂಡಿರುವ ಪೋಲೀಸ್ ಇಲಾಖೆಯುವರು, ಅವಳ ಮಾತನ್ನು ಯಾವ ಪ್ರಮಾಣವೂ ಇಲ್ಲದೇ ನಂಬುವುದು ಹೇಗೆ ? ಆಪಾದಿತ ನಿರಪರಾಧಿ ಎಂದು ಭಾವಿಸತಕ್ಕದು ಎಂಬೊಂದು ತತ್ವವೇ ಇದೆಯಾದರೂ, ಆವರ ಮೇಲಿನ ಅಪಾದನೆಯನ್ನು ಸಂಶಯಾತೀತವಾಗಿ ರುಜುವಾತು ಪಡಿಸತಕ್ಕದು ಎಂಬುದೂ ಅಪರಾಧಿಕ ನ್ಯಾಯಶಾಸ್ತ್ರದ ಮತ್ತೊಂದು ತತ್ವ.

"ಪಾಪ ಅಂತ ಮರುಗದೇ ನಮ್ಮ ಪಾಡಿಗೆ ನಾವು ಹೋಗಿದ್ದಿದ್ರೆ ಈ ಪ್ರಾಬ್ಲಮೇ ಬರ್ತಿರ್ಲಿಲ್ಲ. ಏನೋ ಮಾಡೋಕೆ ಹೋದ್ರೆ ಏನೇನೋ ಆಗ್ತಿದೆ ಇದು" ಸುಮನಾ ಪುನಃ ಹೇಳಿದಳು.

"ಅದ್ಸರಿ, ಆದ್ರೆ ಆತುರದಲ್ಲಿ ಯಾಕೆ ಕಾರಿನಿಂದ ಹೆಣನ ಹೊರಗೆ ಹಾಕಿದ್ರಿ ನೀವು ? ನಾವು ಅದ್ನ ಹೇಗಿತ್ತೋ ಹಾಗೇ ನೋಡ್ಬೇಕಿತ್ತು" ಪಿ. ಐ. ಕೇಳಿದರು.

"ನಮ್ಗೆ ಊರಿಗೆ ಹೋಗೋ ಆತುರ, ಅಲ್ದೇ ನಮ್ಮನ್ನೇ ಕೊಲೆಗಾರರು ಅಂತ ಮಾಡಿಬಿಡ್ತಾರೆ ಅನ್ನೋದು ಗೊತ್ತಾಗ್ಲಿಲ್ಲ, ನಿಮ್ಮನ್ನ ಕರಸ್ತಾರೆ ಅನ್ನೋದೂ ತಿಳೀಲಲ್ಲ. ಏನೋ ಮಗ ಸತ್ತ ದುಃಖಕ್ಕೆ ಹುಚ್ಚಾಗಿ ನಮ್ಮನ್ನೇ ಬೈತಾ ಇದಾರೆ ಅಷ್ಟೇಂತ ಅಂದ್ಕೊಂಡೆ, ಮೊದ್ಲು ಅವ್ರು ನನ್ಮೇಲೆ ರೇಗಿದಾಗ," ದಯಾಕರ ಉತ್ತರಿಸಿದ,

"ನಂಬೋ ಹಾಗೆ ಕತೆ ಕಟ್ಟೋಕೆ ಎಲ್ರಿಗೂ ಬರುತ್ತೆ ಇನ್ಸ್‌ಪೆಕ್ಟರೇ, ಕೊಲೆ ಮಾಡಿಲ್ದಿದ್ರೆ ನನ್ಮಗನ ಜೇಬಲ್ಲಿದ್ದ 10 ಸಾವಿರ ರೂಪಾಯಿ

ಎಲ್ಲೋಯ್ತು ? ಈಗ ನೀವೇ ನೋಡಿದ್ರಲ್ಲ ಹಣ ಇಲ್ಲಾಂತ. ಮೊದ್ಲು 10 ಸಾವಿರ ಕೊಡ್ಸಿ. 10 ಸಾವಿರ ಕೊಟ್ರೆ ನನ್ನ ಮಗನ ಸಂಸ್ಕಾರದ ಖರ್ಚಾದ್ರೂ ಆಗುತ್ತೆ, ಕೋರ್ಟು, ಕಛೇರೀಂತ ರಾಮಾಯಣ ಮಾಡೋದು ನಂಗೂ ಏನೂ ಇಷ್ಟ ಇಲ್ಲ, ಮಗ ಹೋಗೋನಂತೂ ಹೋದ, ಯಾಕೆ ಕೊಲೆಯ ರಾಮಾಯಣ, ಅವನ ಕೈಲಿದ್ದ ದುಡ್ಡು ವಾಪಸ್ ಇಸ್ಕೊಂಡು ಒಂದೆರಡು ಒದೆ ಕೊಟ್ಟು ಮನೆಗೆ ಕಳ್ಸಿ ಅಷ್ಟೆ..." ಎಂದು ಸಲಹೆ ನೀಡಿದ ರಾಘವಪ್ಪ. ಪೋಲೀಸರು ಮತ್ತು ಪಿ. ಐ.ಗಳ ಮುಖ ನೋಡಿ, ಮತ್ತೆ ಸಿಟ್ಟಿನಿಂದ ಮುಂದುವರಿಸಿದ, "ನಿಮ್ಮ ಕೈಲಿ, ನಮ್ಮ ಹಣ ನಮ್ಗೆ ವಾಪಸ್ ಕೊಡ್ಸೋಕೆ ಆಗದೇ ಇದ್ರೆ, ಜೈಲಿಗೆ ಹಾಕಿ ಬಿಡಿ ಇವ್ರನ್ನ. ಕೇಸ್ ಹಾಕಿ ಕೋರ್ಟಿಗೆ ಓಡಾಡಿ ನನ್ನಂತೇ ಗೆಲ್ಲಿಸಿಕೊಳ್ತೀನಿ".

"ಹ್ಞಾ ಹ್ಞಾ, ಸುಮ್ನೇ ಬಾಯಿಗೆ ಬಂದ್ಹಾಗೆ ಮಾತಾಡ್ಬೇಡಿ ರಾಘವಪ್ಪ ಮುರ್ಕಿನಮನಿಯವರೇ ತಮ್ಮಿಷ್ಟ ಬಂದ್ಹಾಗೆ ಅರೆಸ್ಟ್ ಮಾಡೋಕೆ ಮಕ್ಕಳ ಆಟ ಅಲ್ಲ ಇದು'. ಎರಡೂ ಕೈ ಮೇಲೆತ್ತಿ, ಅವನ ಮಾತಿಗೆ ತಡೆ ಹಾಕಿ ಹೇಳಿದರು. ಪಿ. ಐ. "ನಿಮ್ಮಗನ ಸಾವಿನ ದುಃಖದಿಂದ ಏನೇನೋ ಮಾತಾಡಿ ನಮ್ಮ ತಲೆನೂ ಕೆಡಿಸ್ಬೇಡಿ. ಅವರ ಮೇಲೇ ನಿಮ್ಗೆ ಅಷ್ಟೊಂದು ಅನುಮಾನ ಇದ್ರೆ, ಸಕಾರಣ ಸಹಿತ ವಿವರವಾಗಿ ನಿಮ್ಮದೊಂದು ಸ್ಟೇಟ್ ಮೆಂಟ್ ಕೊಡಿ, ಅಥವಾ ಡೀಟೈಲ್ ಆಗಿ ಎಲ್ಲಾ ತಿಳ್ಸಿ. ನಾವೇ ಬರ್ಕೊಂಡು ಆದ ಮೇಲೆ ಅಗತ್ಯ ಕ್ರಮ ತೊಗೊಳ್ತೀವಿ".

"ಬೇಡ ನೀವು ನಾನು ಹೇಳಿದ್ದನ್ನ ಸರಿಯಾಗಿ ಬರ್ಕೊಳ್ತೀರೋ ಇಲ್ವೋ, ಎಲ್ಲಾ ಹೇಳೋಕಿಂತ ಬರೆಯೋದೇ ವಾಸಿ, ಅದ್ರೆ ಓಹ್ ನನ್ಮಗನ ಅಂತ್ಯ ಸಂಸ್ಕಾರದ ಬಗ್ಗೆ ಕೆಲ್ಸ ಮಾಡ್ಲೋ ಅಥ್ವಾ ಬರೀತಾ ಕೂತ್ಕೊಳ್ಲೋ, ಓ ಅಂದ್ಹಾಗೆ ಅದಕ್ಕೂ ಶವ ಕೊಡಬೇಕಲ್ಲ ನೀವು...ಅಲ್ಲಿ ನನ್ನ ಹೆಂಡ್ತಿ ಅಳ್ತಾ ಇದಾಳೆ, ಇಲ್ಲಿ ನನ್ಮಗಳು, ಅವರನ್ನ ಸುಧಾರಿಸಲೋ ನಿಮ್ಮ ಪ್ರಶ್ನೆಗೆ ಉತ್ತರಿಸ್ತಾ ಕೂಡ್ಲೋ ? –ಛೆ ಛೆ ಛೆ–ಹುಂ–ಅದ್ರೆ ಈ ಕೊಲೆಗಡುಕರನ್ನು ಹಾಗೇ ಕೈ ಬಿಡಲ್ಲ ನಾನು, ನಾನೇ ಬರೀತೀನಿ, ಆಮೇಲೆ ಮುಂದಿನ ಕೆಲ್ಸ ನೋಡ್ತೀನಿ ಅಯ್ಯೋ ಸುರೇಶ ಏನಾಗಿ ಹೋಯ್ತೋ ನಿಂಗೆ

BUREAU OF COPY RIGHT COLLECTION.
STATE CENTRAL LIBRARY. BANGALORE

ಪೆನ್ನು, ಪೇಪರು—ಹುಂ ನನ್ಮಗ್ಗು ಕೊಡೋ ಸ್ಥಿತೀನಲ್ಲಿಲ್ಲ ಸುರೇಶ ನನ್ಮಗ-ಅವ್ನು ಇನ್ನಿಲ್ಲ-ಅವ್ನನ್ನ ಕೊಂದೋರಿಗೆ ಕೊಲ್ಲಬೇಕು ಎಂದು ಹುಚ್ಚನಂತೆ ಬಡಬಡಿಸಿ ಅತ್ತ ಇತ್ತ ಓಡಾಡಿ, ಪೋಲೀಸ್ ಇನ್ಸ್‌ಪೆಕ್ಟರು ನೀಡಿದ ಹಾಳೆಯ ಮೇಲೆ ಏನೋ ಬರೆಯಲೆಂದು ಕೈಗೆ ತೆಗೆದುಕೊಂಡ ರಾಘವಪ್ಪ ಮುರುಕಿನಮನಿ.

ಸೇರಿದ ಗುಂಪಿನಲ್ಲಿ ಗುಸು ಗುಸು, ದಯಾಕರ ಸಮಸಾರ ಡಿಫೆನ್‌ಸೀವ್ ಹೇಳಿಕೆಗಳು, ಇನ್ಸ್‌ಪೆಕ್ಟರರ ಪ್ರಶ್ನೆಗಳು, ಸುರೇಶನ ತಂದೆ ರಾಘವಪ್ಪನ ಬಡಬಡಿಕೆ ಕೂಗಾಟ, ಇವೆಲ್ಲ ಏರಿಳಿತಗಳ ತಾನದಲ್ಲಿ ನಡೆಯತೊಡಗಿತ್ತು. ಇದಾವುದರ ಪರಿವೆಯೂ ಇಲ್ಲದೇ ಸುರೇಶನ ದೇಹ ಮಿಸುಕಾಡದೇ ಅಂಗಳದಲ್ಲಿ ಒಣಗುತ್ತಿತ್ತು.

"ನನ್ನ ಹೆಸರು ರಾಘವಪ್ಪ ಮುರ್ಕಿನಮನಿ. ಧಾನ್ಯಗಳ ವ್ಯಾಪಾರಿ, ನನ್ನ ಮಗ ಸುರೇಶ್ ಮುರ್ಕಿನಮನಿ. ಈ ದಿನ ಮಧ್ಯಾಹ್ನ 2 30 ಗಂಟೆಗೆ ಅವನನ್ನು ನನಗೆ ಸಾಲ ಕೊಟ್ಟ ವ್ಯಾಪಾರಿ ರಾಮಪ್ಪನ ಮನೆಗೆ ಕಳಿಸಿದ್ದೆ ರಾಮಪ್ಪನ ಮನೆ ಇರುವುದು ಸಾರಗನಪುರದ ಬಳಿ, ರಾಮಪ್ಪ ನನಗೆ ಕೊಟ್ಟ ಸಾಲವನ್ನು ಇವತ್ತಿನೊಳಗೆ ಕೊಡಬೇಕೆಂದು ಕೇಳಿದ್ದರಿಂದ, ಈ ದಿನ ಅದನ್ನು ಸುರೇಶನ ಮೂಲಕ ಕೊಟ್ಟು ಕಳುಹಿಸಿದ್ದೆ, ಆದರೆ ಹಣ ತೆಗೆದುಕೊಂಡು ಹೋದ ಮಗ ಹೆಣವಾಗಿ ಮನೆಗೆ ಹಿಂದಿರುಗಿದ್ದಾನೆ, ತಲೆಗೆ ಪೆಟ್ಟು ಹಾಕಿ ಅಥವಾ ಕತ್ತು ಹಿಸುಕಿ ಕೊಂದಿದ್ದಾರೆ ಎನಿಸುತ್ತದೆ, ದಯಾಕರ ಎನ್ನುವ ಹೆಸರಿನವನು ಹೆಂಡತಿ ಸುಮನಾ ಎಂಬುವಳೊಡನೆ ಈ ಹೆಣವನ್ನು ಮನೆಯ ಬಳಿ ತಂದು ಹಾಕಿದ್ದಾರೆ, ಇವರೇ ಇಬ್ಬರು ಹಣ ಕಸಿಯಲು ಹೋಗಿ ಸುರೇಶನ ಪ್ರಾಣ ತೆಗೆದಿದ್ದಾರೆ ಎಂದು ನನಗೆ ಬಲವಾದ ಅನುಮಾನ ಬಂದಿದೆ. ಸುರೇಶನಿಗಾಗಲೀ ನನಗಾಗಲೀ ಯಾರೂ ಶತ್ರುಗಳಿಲ್ಲ. ದಯಾಕರನೇ ಈ ಕೆಲಸ ಮಾಡಿದ್ದಾನೆ ಎಂಬುದು ನಿಸ್ಸಂಶಯ. ಗಂಡ ಹೆಂಡತಿ ಸೇರಿ ಮಾಡಿರುವ ಎರಡು ಅಪರಾಧಗಳೆಂದರೆ ಕೊಲೆ ಮತ್ತು ಕಳ್ಳತನ, ಸುರೇಶನ ಜೇಬಿನಲ್ಲಿದ್ದ 10,000 ಸಾವಿರ ರೂ. ಕಳವಾಗಿದೆ.

ರಾಮಪ್ಪ ಸಂಜೆ 7 ಘಂಟೆಗೆ ಮನೆಗೆ ಫೋನ್ ಮಾಡಿ ಹಣ ಬಂದಿಲ್ಲ ಎಂದು ತಿಳಿಸಿದ್ದ, ಆದರೆ 7 ಘಂಟೆಯ ಸಮಯದಲ್ಲೀ ದಯಾಕರ ಸುರೇಶನನ್ನು ಭೇಟಿ ಮಾಡಿದ್ದು ಎಂದು ಹೇಳುತ್ತಿದ್ದಾನೆ. ಇವರೇ ಅಪರಾಧಿಗಳು ಎಂದು ನನ್ನ ಮನಸ್ಸು ಹೇಳುತ್ತಿದೆ. ಈ ಬಗ್ಗೆ ತನಿಖೆ ನಡೆದು ಸರಿಯಾದ ಶಿಕ್ಷೆ ಆಗಲೇಬೇಕು, ಮತ್ತು ನನಗೆ ನನ್ನ ದುಡಿಯುವ ವಯಸ್ಸಿನ ಮಗನನ್ನೂ, ಜೊತೆಗೆ 10,000 ರೂ. ಅನ್ನೂ ಕಳೆದುಕೊಂಡದ್ದಕ್ಕೆ, ನನಗೆ 35,000 ರೂ. ದೊರಕಿಸಿಕೊಡಬೇಕು" ಮಗನ ಮರಣದ ದುಃಖದೊಡನೆ, ಅವನನ್ನು ಕೊಂದು ಹಾಕಿದ ದಂಪತಿಗಳ ಮೇಲೂ ಅಷ್ಟೇ ಕೋಪ ಇದೆ ಎಂಬಂತೆ ಮುಖ ದುಮುಗುಟ್ಟಿಸಿ ಬರೆದು ಸಹಿ ಹಾಕಿ ಪಿ. ಐ. ನ ಕೈಗಿಟ್ಟ ರಾಘವಪ್ಪ, ಮತ್ತೊಮ್ಮೆ ಈ ಬಗ್ಗೆ ವಿವರಣೆ ನೀಡುತ್ತಾ,

"ಹಣ ತಂದವರೇ 10,000 ರೂ. ಕದ್ದಿದ್ದಾರೆ ಅಂತ ಯಾವ ಆಧಾರದ ಮೇಲೆ ಹೇಳ್ತೀರಾ" ? ಪಿ. ಐ.ನ ಪ್ರಶ್ನೆ.

"ಆಗ್ಲೇ ಹೇಳಿದ್ನಲ್ಲ, ಸುರೇಶ 7 ಘಂಟೆ ಆದ್ರೂ ರಾಮಪ್ಪನ ಮನೆಗೆ ಹಣ ಮುಟ್ಟಿಸಿಲ್ಲ ಅಂತ ಫೋನ್ ಬಂದಿತ್ತು ಅಂತ. 2. 30ಕ್ಕೆ ಹೋದ ಮಗ ಇಷ್ಟು ಹೊತ್ತಾದರೂ ಯಾಕೆ ಅವರ ಮನೆಗೆ ಹೋಗ್ಲಿಲ್ಲ ಅಂತ, ಒಂದು ಸಲ ನಂಗೆ ಷಾಕ್ ಆಯ್ತು. ಏನೂ ಹೇಳೋಕಾಗ್ದೇ ಫೋನ್, ಇಟ್ಬಿಟ್ಟೆ."

"ಸರಿ, ಈ ಹಣಾನ ದಯಾಕರ. ಅವನ ಹೆಂಡತಿಯೇ ಕದ್ದಿದ್ದಾರೇಂತ ಯಾಕೆ ಅನುಮಾನ ? 7 ಘಂಟೆಗೆ ಮೊದಲು ಅವನೇಕೆ ರಾಮಪ್ಪನ ಮನೆಗೆ ಹೋಗಲಿಲ್ಲಾಂತ ಯೋಚ್ನೇ ಮಾಡಿ, ಬೇರೆ ಯಾರಾದ್ರೂನೂ ಕದ್ದಿರ ಬಹುದಲ್ಲಾ ?"

"ಬೇರೆ ಯಾರೋ ಕದ್ದು, ಸುರೇಶನ್ನ ಕೊಂದು ಹಾಕಿದ್ರೆ. ಆ ಹೆಣಾನ ಇವ್ನು ಇಲ್ಲಿಗೆ ತರ್ತಾನಾ ಸಾರ್ ? ನಾನು ಆಗ್ಲೇ ಹೇಳ್ದೆ, ದಾರೀಲಿ ಬಿದ್ದ ಹೆಣಾನ ಯಾವ ಮುಟ್ಠಾಳನೂ ಮುಟ್ಟೋಕೋಗಲ್ಲಾಂತ, ಇನ್ನು ಮನೇ ತನಕ ಕಾರಲ್ಲಿ ತಂದ್ ಹಾಕ್ತಾರಾ ? ನೀವೆ ಹೇಳಿ ಸಾರ್ ? ಅದೂ ಇಂಥ ಓದಿದ ಹುಡುಗರಿಗೆ ನೂರು ತರಹದ ಬುದ್ಧಿ ಇರುತ್ತೆ".

"ದಾರೀಲಿ ಬಿದ್ದದ್ದು ಹೆಣ ಅಲ್ಲ, ಇನ್ನೂ ಸಾಯದೇ ಒದ್ದಾಡುತ್ತಿದ್ದ ಹುಡುಗ" ದಯಾಕರ ತನ್ನ ಕುಪಿತ– ದನಿ ಸೇರಿಸಿ ಸ್ಪಷ್ಟ ಪಡಿಸಿದ.

"ನಿಮ್ಗೆ ಈ ದಯಾಕರ್ ಮೊದ್ಲೇ ಗುರ್ತಾ ? ಅವರ ಸ್ವಭಾವ ಹೀಗೇ ಅಂತ ಹೇಗೆ ಹೇಳ್ತೀರಾ ? ಎಜುಕೇಟೆಡ್ ಹುಡುಗರು ಎಷ್ಟು ಜನ ಇನ್ನೋಸೆಂಟ್ ಇರ್ತಾರೆ ಗೊತ್ತಾ ?" ಪೋಲೀಸ್ ಆಫೀಸರ್ ತನ್ನ ಪ್ರಶ್ನೆ ಮುಂದುವರಿಸಿದರು.

ದಯಾಕರನ ಮುಖವನ್ನೇ ನೋಡಿದ ರಾಘವಪ್ಪ ಮುರ್ಕಿನಮನಿ, ಕೇಡಿಯ ತಲೆಯಲ್ಲಿ ಸಾವಿರ ಹೊಳಪುಗಳು. ಸಿಟ್ಟಿನಲ್ಲಿ ಗಾಂಭೀರ್ಯ ಬೆರೆಸಿ ದೃಢವಾಗಿ ಹೇಳಿದ "ಅವನಿಗೆ ನಾನ್ಯಾರು ಅಂತ ಗೊತ್ತಿಲ್ಲ. ಆದರೆ ಅವ್ನ ಬುದ್ಧಿ ನನಗೆ ಚೆನ್ನಾಗಿ ಗೊತ್ತು, ಇಂಥ ಕಿತಾಪತಿ ಎಷ್ಟೋ ಮಾಡಿದಾನೆ ಅಂತ, ನನ್ನ ಸ್ನೇಹಿತ ಜಾರ್ಜದೂ ಹಣ ದೋಚಿದ್ದಾನೆ ಇವನು ಒಂದು ಸಲ"

ಹೇಳಿಕೆಗೆ ಇದ್ದಕ್ಕಿದ್ದಂತೆ ಹೊಸ ತಿರುವು ? ಹೊಸ ಸಂಗಾತಿಗಳ ತಲೆಗೆ ನೂರು ಸುತ್ತಿಗೆಯಿಂದ ಪೆಟ್ಟು ಕೊಟ್ಟಂಥ ನೋವು, ಅಬ್ಬ ಏನು ಸುಳ್ಳು ಇದು ? ಮಗನ ದೇಹವನ್ನು ಮನೆಗೆ ತಂದು ಹಾಕಿದ ಮಹದುಪಕಾರಕ್ಕೆ ಎಂಥ ಮರ್ಯಾದೆ ಇದು ? ಸುಳ್ಳಿಗೆ ಸಾವಿರ ದ್ವಾರ. ಹೇಗೆ ಬೇಕಾದರೂ, ಎಲ್ಲಿ ಬೇಕಾದರೂ ನುಸುಳಿ ಹೋಗಬಹುದು. ಆದರೆ ಸತ್ಯಕ್ಕೆ ಒಂದೇ ಬಾಗಿಲು.

"ಸುಳ್ಳು ಸಾರ್, ಇದೆಲ್ಲ ಸುಳ್ಳು" ಗಂಟಲು ನೋಯುವಂತೆ ಕಿರುಚಿದರು ನಿಂತು ಕೇಳಿಸಿಕೊಳ್ಳುತ್ತಿದ್ದ ಜೋಡಿಗಳು.

"ಸುಳ್ಳು ? ಹುಂ ನಿನ್ನ ಗುಣಕ್ಕೊಂದು ಸಾಕ್ಷಿ ಬೇಕಾ ? ಕರೆಸ್ತೀನಿ ತಾಳಪ್ಪಾ ದಯಾಕರ" ಎಂದವನು "ರಾಣೀ" ಎಂದು ಮಗಳಿಗೆ ಕರೆದು ಹೇಳಿದ, "ನನ್ನ ಫ್ರೆಂಡ್ ಜಾರ್ಜನ ಬರಹೇಳು, ಇವ್ನ ಜಾರ್ಜನ ಹಣ ಕದ್ದ ವಿಷಯ ಅವನ ಬಾಯಲ್ಲೇ ಕೇಳಿಸೋಣ, ನಂಗೂ ಇವನದು

ಮೊದಲು ಗುರುತ್ತೇ ಸಿಕ್ಕಿರಲಿಲ್ಲ, ಇವ್ನ ಒದರಾಟ, ಧ್ವನಿ ಕೇಳಿದ ಮೇಲೆ ಗುರುತು ಸಿಕ್ತು: ಆ ಅಂದಿನ ಕಳ್ಳನೇ ಆವ್ನೂಂತ".

"ಒಂದೇ ಒಂದು ಸತ್ಯದ ಮೇಲೆ ನೂರು ಸುಳ್ಳುಗಳ ಆಕ್ರಮಣ ? ದಯಾಕರ ಮೊದಲಿನಿಂದಲೂ ಕಳ್ಳ ? ಸುಳ್ಳುಗಳಿಂದ ತಪ್ಪಿಸಿಕೊಂಡು ಹೊರಗೆ ಹೋಗಲು ದಾರಿ ಎಲ್ಲಿದೆ ? ಏನನ್ನೂ ಹೇಳಲಾಗದ, ನಿಜವನ್ನೂ ತೋರಿಸಲಾಗದ ಸಂಕಟದ ಸ್ಥಿತಿ. ದಯಾಕರನ ಹೆಂಡತಿಗೆ ಮಾತೇ ನಿಂತು ಹೋದಂಥ ಭಯ. ಸತ್ಯದಲ್ಲೇ ಮೈ ತೊಳೆದು ಹಿರಿಯರಲ್ಲಿ ಭಯ-ಭಕ್ತಿಗಳನ್ನು ಬೆಳೆಸಿಕೊಂಡ ಹುಡುಗಿ ಸುಮನಾ, ಹೆಚ್ಚು ಜನರ ನಡುವೆ ನಿರಾಳವಾಗಿ ಓಡಾಡಲೂ ಸಂಕೋಚ ಪಡುವ ಪ್ರವೃತ್ತಿಯವಳು, ಈ ಕಪಟಿಗಳ ಮುಂದೆ, ನೆರೆದ ಚಿಕ್ಕ ಗುಂಪಿನ ಎದುರು ಏನು ಹೇಳಿಯಾಳು ? ದಿಕ್ಕು ತೋಚದ ಈ ಸ್ಥಿತಿಯಲ್ಲಿ ಭಯ ಮತ್ತು ತಲೆನೋವು ಮಾತ್ರವೇ ಅವಳ ಹತ್ತಿರ ಸರಿದದ್ದು. ಅವಳನ್ನಾವರಿಸಿದ ಇವೇ ಎರಡು ಉಳಿದವರ ಕಣ್ಣುಗಳಲ್ಲಿ ಅನುಮಾನ ತುಂಬುವಂತೆ ಮಾಡಿದ್ದು.

"ಇತರರ ನೆಮ್ಮದಿಯ ಬದುಕಿಗೆ ರಗಳೆ ಅಂಟಿಸುವ ಹುಳುಗಳಿವು, ಫೋನ್ ಮಾಡಿಸ್ತಾನಂತೆ ನೋಡಿ, ಎಂಗೆ ಕೈ ಬಿಡಿ, ಈಗ್ಲೇ ಒಬ್ಬ ಲಾಯರ್‌ನ ಕರೆತರ್‍ತೀನಿ. ಎಲ್ಲಾ ಸುಳ್ಳು, ಸಾಕ್ಷಿಗಳ್ನ ನಮ್ಮೆದುರೇ ತಯಾರು ಮಾಡ್ತಾನೆ ರ‍್ಯಾಸ್ಕಲ್" ದಯಾಕರನ ತಲೆ, ರಾಘವಪ್ಪ ಮುಂದೆ ಮಾಡಬಹುದಾದುದನ್ನು ಯೋಚಿಸಿ, ಅವನಲ್ಲಿ ಹದ್ದು ಮೀರಿದ ಸಿಟ್ಟು ಹುಟ್ಟಿಸಿ ಕೂಗಾಡಿಸಿತು. ರಾಘವಪ್ಪನ ಮನೆಯೊಳಗೆ ಹೋಗಲು ನೋಡಿದ ದಯಾಕರನ ಕೈ ಹಿಡಿದು ತಡೆದು, ತಮ್ಮ ಹೇಳಿಕೆ, ಪ್ರಶ್ನೆ ಇತ್ಯಾದಿ ಮುಂದುವರಿಸಿದರು ಇನ್ಸ್‌ಪೆಕ್ಟರು, "ಮನೆ ಒಳಗೆ ಇಬ್ಬರು ಪಿ.ಸಿ.ಗಳಿದ್ದಾರೆ ಮಿಸ್ಟರ್ ಹೆದರ್‍ಬೇಡಿ- ಜಾರ್ಜ್‌ಗೆ ಫೋನ್ ಮೂಲಕ ಸುಳ್ಳು ಹೇಳಿಕೊಡೋಕೆ ಆಗಲ್ಲ ಇವರ ರಾಣಿಗೆ", ಎಂದು ಬೆನ್ನು ತಟ್ಟಿ, "ಹ್ಞಾ" ನೀವು ಈ ಸುರೇಶನನ್ನು ಕಾರಿನಲ್ಲಿ ಎತ್ತಿ ಹಾಕುವಾಗ ಹೊಡೆದಾಟದ ಗುರುತುಗಳಾಗಲೀ, ರಕ್ತದ ಕಲೆಗಳಾಗಲೀ ಏನಾದರೂ ಅಲ್ಲಿ ಕಾಣಿಸಿತೇ" ?

ಹೊಡೆದಾಟದ ಕುರುಹು ? ರಕ್ತದ ಕಲೆ ? ದಯಾ ಮತ್ತವನ ಹೆಂಡತಿ ಗಲಿಬಿಲಿಗೊಂಡರು. ಕಾಣುವಷ್ಟು ರಕ್ತದ ಕಲೆಗಳಂತೂ ಇರಲಿಲ್ಲ. ಹೊಡೆದಾಡಿದ ಗುರುತಿನ ಬಗ್ಗೆ ತಾವು ಗಮನಿಸಲೇ ಇಲ್ಲವಲ್ಲ ? ಅಂದರೆ ಇದು ಕೊಲೆಯೇ ಇರಬಹುದೇ ? ಯಾರೋ ಮಾಡಿದ ಕೊಲೆಯ ಪ್ರಯತ್ನಕ್ಕೆ, ತಮ್ಮಿಬ್ಬರನ್ನೂ ಆಹುತಿಗೊಳಿಸುವ ಯೋಜನೆಯೇ ಇದು ? ಆದರೆ ಆಕಸ್ಮಾತ್ ಕೊಲೆಯಾಗಿರಬೇಕು, ಪೂರ್ವ ಯೋಜಿತವೆನ್ನಲು, ಅಲ್ಲಿದ್ದವರಾಗಲೀ, ಇಲ್ಲಿರುವವರೇ ಆಗಲೀ, ಯಾರೂ ತಮಗೆ ಪರಿಚಿತರಲ್ಲ, ಪರಿಚಿತರಲ್ಲದವರ ಮೇಲೆ ಕೊಲೆಯ ಅಪಾದನೆ, ಹಾಕುವ ಯೋಜನೆ ಯಾರು ತಾನೇ ಮಾಡ್ತಾರೆ ? ಅಥ್ವಾ ಆ ರಸ್ತೆಯಲ್ಲಿ ಆಗ ಯಾರೇ ಬಂದರೂ ಈ ಕೊಲೆಯನ್ನು ಅವರಿಗಂಟಿಸುವ ಆಲೋಚನೆ ಆ ಮೇಲೆ ಬಂದಿರಬಹುದೇ ಅವರಿಗೆ ? ಬಿದ್ದ ಹುಡುಗನಂತೂ ಸತ್ತಿರಲಿಲ್ಲ ಆಗ. ಅಲ್ಲಿ ನೆರೆದಿದ್ದ ಆ ನಾಲ್ವರೂ ಈ ಕೊಲೆಯಲ್ಲಿ ಭಾಗಿಗಳೇ ? ಅಥವಾ ಆಸ್ಪತ್ರೆಯವರೆಗೆ ಬಂದು ಅವಸರದ ನಿಮಿತ್ತ ತೋರಿದ ಆ ಮುದುಕನ ಕೈವಾಡವೇ ಇದು ? ಊಹೂಂ, ಇರಲಿಕ್ಕಿಲ್ಲ, ನೋಡಲು ತುಂಬ ಸಭ್ಯನಂತೆ ಕಾಣುತ್ತಿದ್ದ, ಇಂದಿನ ಪಾಪಕೃತ್ಯದ ಬಗ್ಗೆ, ನಿಮಿಷ ನಿಮಿಷಕ್ಕೆ ನಡೆಯುವ ಅಪಘಾತಗಳ ಬಗ್ಗೆ. ಕಾರಿನಲ್ಲಿ ಕೂತ ಆ ಐದು ನಿಮಿಷಗಳು ಸಾಕಷ್ಟು ಮಾತಾಡಿದ್ದ, ಯಾವುದೋ ಕಛೇರಿಯಲ್ಲಿ ಫೀಲ್ಡ್ ಆಫೀಸರ್ ಆಗಿ ರಿಟೈರ್ ಆದವನೆಂದು ಹೇಳಿದ ಹಾಗಿತ್ತೇ"?.

"ಏನ್ರೀ ಎಷ್ಟೊತ್ತು ಯೋಚ್ನೆ ಮಾಡ್ತಾ ನಿಂತ್‌ಬಿಟ್ರಲ್ಲ ? ಯಾಕೆ ? ಪಿ. ಐ. ನ ಅನುಮಾನದ ಪ್ರಶ್ನೆ ದಯಾಕರನ ಯೋಚನೆಗೆ ತಡೆ ಹಾಕಿತು.

"ಆ...ನಾವೂ...ನಾವು ಅದನ್ನೆಲ್ಲ ಗಮನಿಸಲೇ ಇಲ್ಲ ಇನ್ಸ್‌ಪೆಕ್ಟರೇ, ರಕ್ತವಂತೂ ಬಿದ್ದಿರಲಿಲ್ಲ ಅಲ್ಲಿ. ಯಾಕೆ ಗಮನಿಸಲಿಲ್ಲಾಂದ್ರೆ, ನಮಗೆ ಇದ್ರ ಕೊಲೆಯ ಪ್ರಯತ್ನ ಎನ್ನುವುದಾಗಲೀ, ದಾರಿಯಲ್ಲಿ ಸಾಯಬಹುದು ಎಂಬ ಅಂಶವಾಗಲೀ, ನಮ್ಮ ಮೇಲೆ ಕೊಲೆಯ ಆಪಾದನೆ ಬರಬಹುದೆಂಬ ಯೋಚನೆಯಾಗಲೀ ಮಿದುಳಿನ ಹತ್ತಿರವೂ ಸುಳಿಯಲಿಲ್ಲ" ದಯಾಕರ ತಮ್ಮ ನಿರ್ಲಕ್ಷ್ಯಕ್ಕೆ ಕಾರಣ ತಿಳಿಸಿದ.

"ನೀವೇನು ಹೇಳ್ತೀರಾ ಮಿಸೆಸ್ ದಯಾಕರ್ ? ನೀವೂ ಒಮ್ಮೆ ಯಾದ್ರೂ ಆ ಸ್ಪಾಟನ್ನು ಗವುನಿಸಲಿಲ್ವೇ ?" ಸುಮಳ ಕಡೆ ತಿರುಗಿ ಕೇಳಿದರು ಪಿ. ಐ.

"ಊಹ್ನೂ. ಇಲ್ಲ, ಅದನ್ನೆಲ್ಲ ಗಮನಿಸಲು ನಾವೇನು ಪೋಲೀಸರೇ, ಪತ್ತೇದಾರರೇ ? ಗಮನಕ್ಕೆ ಬಂದಿದ್ದರೆ, ಬಿದ್ದವನ ತಂಟೆಗೇ ಹೋಗ್ತಿರಲಿಲ್ಲ. ಆಗಲೇ ಕತ್ತಲು ಬೇರೆ ಆಗಿತ್ತು, ಬಹುಶಃ ಆಚೀಚೆ ಅಲ್ಲೇನಾದರೂ ರಕ್ತದ ಹನಿಗಳಿದ್ದರೂ ಅಥವಾ ಇನ್ನೇನಾದರೂ ಸಾಧನಗಳನ್ನು ಅಲ್ಲೇ ಎಲ್ಲಾದರೂ ಎಸೆದು ಹೋಗಿದ್ದರೂ, ನಮ್ಮ ದೃಷ್ಟಿಗೆ ತಾನಾಗಿ ಬೀಳುವಷ್ಟು ಬೆಳಕು ಇರಲಿಲ್ಲ ಅಲ್ಲಿ. ದೀಪದ ಕಂಬದ ಬೆಳಕಿನಲ್ಲಿ ನಾವು ಕಂಡದ್ದು. ನರಳುತ್ತಿದ್ದ ಈ ಹುಡುಗನನ್ನು ಮಾತ್ರ. ಅವನು ಫಿಟ್ಸ್ ಬಂದು ನಿಂತ ಮೇಲೆ, ನೋವಿನಿಂದ ನರಳುತ್ತಿರುವಂತೆಯೇ ಕಾಣುತ್ತಿದ್ದ. ಹಾಗೆಂದೇ ನಾವು ಅವನನ್ನು ಆಸ್ಪತ್ರೆಗೆ ಕರೆದೊಯ್ಯುವ ಸಹಾಯದ ಕೆಲಸಕ್ಕೆ ಕೈ ಹಾಕಿದ್ದು", ತನ್ನನ್ನೇ ಪ್ರಶ್ನಿಸಿದಾಗ ಸುಮಾ ಕೊಂಚ ಧೈರ್ಯ ತಳೆದು ಉತ್ತರಿಸಿದಳು.

"ನಿಮಗೆ ಈ ಖಾಯಿಲೆಯವನನ್ನು ಮಲಗಿಸಿಕೊಂಡರೆ, ನಿಮ್ಮ ಕಾರಿನ ಸೀಟು ಹಾಳಾಗುತ್ತೆ ಅನಿಸಲಿಲ್ವೇ" ?

"ಹ್ನುಹ್, ಏನು ಪ್ರಶ್ನೆ ನಿಮ್ದು? ಒಂದು ಪ್ರಾಣಕ್ಕಿಂತ ಕಾರಿನ ಸೀಟು ಹೆಚ್ಚೇ ? ಅದೂ ಸೀಟಿಗೆ ಮೆತ್ತುವಂತ ರಕ್ತ, ನೀರು, ಮಣ್ಣು ಏನು ಕಾಣುತ್ತಲೇ ಇರ್ಲಿಲ್ಲ ಎಂದೆನಲ್ಲ. ಇನ್ನೊಂದು, ದಿನಕ್ಕೆ ಹತ್ತಾರು ತರಹದ ಜನರನ್ನು ಕೂಡಿಸಿ ಓಡಾಡಿಸುವ ಟ್ಯಾಕ್ಸಿಯ ಸೀಟಿಗೆ ಕೊಳಕು ಹಚ್ಚುವ ಜನರು ಎಷ್ಟೋ ಏನೋ" ? ಸುಮನಾ ಹೇಳಿದಳು.

"ದಾರಿಯಲ್ಲಿ ಆ ಹುಡುಗನಿಗೆ ಇನ್ನೊಮ್ಮೆ ಫಿಟ್ಸ್ ಬಂದಿದ್ರೆ ಏನು ಮಾಡುತ್ತಿದ್ರಿ ?" ವೈದ್ಯರ ಬಳಿಗೇ ಕರೆದೊಯ್ಯುತ್ತಿದ್ದವರು ನಾವು ಅಲ್ಲಿಯೇ ಬಿಟ್ಟು ಬರುತ್ತಿದ್ದೆವಷ್ಟೇ, ಫಿಟ್ಸ್ ಮರಣಾಂತಿಕ ಖಾಯಿಲೆಯಲ್ಲ, ಅದು ಮೈ ಬಿಟ್ಟು ಹೋದರೆ ಅವನು ತಾನು ಒಬ್ಬನೇ ಮನೆಗೆ ಹೋಗಬಹುದು ಎನ್ನುವ ಭಾವನೆ ಇತ್ತು ನಮಗೆ, ಅದಕ್ಕೇಂದೇ ಆಸ್ಪತ್ರೆಗೆ ಕರೆದೊಯ್ದುದ್ದು"

ಪೋಲೀಸ್ ಇನ್ಸ್‌ಪೆಕ್ಟರರ ತಲೆಯಲ್ಲಿದ್ದ ಎಲ್ಲ ಬಗೆಯ ಪ್ರಶ್ನೆಗಳು ದಯಾಕರ ಮತ್ತು ಸುಮನಾರ ಮೇಲೆ ಉರುಳುವಾಗಲೇ, ಅದು ಯಾವಾಗ ಅವರೊಡನೆ ಅವತರಿಸಿ ಬಂದಿದ್ದನೋ, ಅಂತೂ ಒಬ್ಬ ಫೋಟೋ ಗ್ರಾಫರ್, ಅಲ್ಲಿದ್ದ ಕಾರು, ಕಾರಿನ ಹಿಂದಿನ ಸೀಟು, ಅಂಗಳದಲ್ಲಿ ಮಲಗಿದ್ದ ಹೆಣ, ಇತ್ಯಾದಿಗಳ ಫೋಟೋಗಳನ್ನು ವಿವಿಧ ಭಂಗಿಯಲ್ಲಿ ತೆಗೆದುಕೊಂಡು ಪಿ. ಐ. ನ ವಿಚಾರಣೆಯ ಮುಕ್ತಾಯಕ್ಕಾಗಿ ಕಾದು ನಿಂತಿದ್ದ ಆಗಲೇ.

ರಾಘವಪ್ಪನ ಮನೆಯೊಳಗಿಂದ ಬಂದ ಒಬ್ಬ ಪಿ. ಸಿ. "ಜಾರ್ಜ್‌ಗೆ ಫೋನ್ ಮಾಡಿದೆ, ಇದೀಗ ಬರುತ್ತಾರಂತೆ ಸಾರ್" ಎನ್ನುತ್ತ ಹೊರಬಂದಾಗ ಇಷ್ಟು ಹೊತ್ತು, ತೆಪ್ಪಗೆ ನಿಂತು, ಅವರ ಪ್ರಶ್ನೋತ್ತರಗಳನ್ನು ಆಲಿಸುತ್ತ ನಿಂತಿದ್ದ ರಾಘವಪ್ಪ ಧಿಡೀರನೇ ತನ್ನ ಬಡಬಡಿಕೆ ಆರಂಭಿಸಿದ.

"ಹ್ಞಾ ಜಾರ್ಜ್ ಬರ‍್ತಾನಂತ, ನಾನ್ ಹೇಳ್ಲಿಲ್ವಾ ? ಅವ್ನನ್ನ ಬೇಕಾದ್ರೆ ಕೇಳಿ ಅಂತ, ಅವ್ನು ಯಾವತ್ತೂ ನಾವ್ ಹೇಳ್ದಾಗ ಬರ‍್ತಾನೆ, ನಾವ್ ಹೇಳಿದ್ ಮಾಡ್ತಾನೆ, ಎಂದೂ ನಮ್ಮ ಕೈ ಬಿಟ್ಟಿಲ್ಲ, ಕೇಳ್ಕೊಳಿ, ಅವನನ್ನೂ ಕೇಳಿ" ಎಂದು ಸ್ವಲ್ಪ ಹೊತ್ತು ಅತ್ತಿತ್ತ ಶತಪಥ ತಿರುಗಿ, ಆಮೇಲೆ ಜನರ ಗುಂಪಿನ ಸುತ್ತ ಒಮ್ಮೆ ನೋಡಿ; ಅಲ್ಲಿದ್ದ ಕಾರನ್ನೂ ಜನರನ್ನೂ ಒಮ್ಮೆ ಪ್ರದಕ್ಷಿಣೆ ಹಾಕುವವನಂತೆ ಸುತ್ತು ಹಾಕಿ ತನ್ನಷ್ಟಕ್ಕೇ ಎಂಬಂತೆ ಹೇಳಿಕೊಳ್ಳ ತೊಡಗಿದ. "ಜಾರ್ಜ್ ಬಂದವನೇ ನೀ ಹೇಳಿಬಿಡು, ಇವನು ನಿಂಗೆ ಪರಿಚಯಾಂತ, ಕಳ್ಳನಾಗಿ ಯಾವಾಗ ಗುರುತಾದ ? ಏನು ಮಾಡಿದ ಎಲ್ಲ ಹೇಳು, ನಿನ್ನ ಹತ್ರ ಇದ್ದ ಹಣ ದೋಚಿದ್ದನ್ನೂ ಹೇಳು. ಈಗ ನನ್ಮಗ ಸುರೇಶಂಗೇ, ತಿಳೀತಲ್ಲ, ನನ್ನ ಮಗ ಸುರೇಶ ಇದಾನಲ್ಲ ಅವ್ನಿಗೆ ಫಿಟ್ಸ್ ಎಲ್ಲಿತ್ತು ? ನಂಗಂತೂ ಗೊತ್ತಿಲ್ಲಾಂತ ಹೇಳು. ಬೇಗ ಬಾ ಜಾರ್ಜ್, ನೀನಾದ್ರೂ ನನ್ನ ದುಃಖ ಸ್ವಲ್ಪ ಕಡಿಮೆ ಮಾಡು. ಬಂದು ಎಲ್ಲಾ ಹೇಳಿ ಬಿಡು..."

ರಾಘವಪ್ಪ ಇನ್ನೂ ಬಡಬಡಿಸುತ್ತಿರುವಾಗಲೇ, 5 1/2 ಅಡಿ ಎತ್ತರದ, ಕಪ್ಪು ಬಣ್ಣದ ದುಡುಮಿಯೊಬ್ಬ ಜನಗಳ ಮಧ್ಯದಿಂದ ಮುಂದೆ

ಬಂದ, "ಏನ್ ಮುರ್ಕಿನಮನಿ ಏನಾಗಿಹೋಯ್ತು ? ಈ ರಾತ್ರೀಲಿ ನಂಗೆ ಇಲ್ಲಿಗೆ ಬರೋಕೆ ಫೋನ್ ಮಾಡಿದ್ದೇಕೆ ?" ಗಾಬರಿ, ಭಯಗಳಿಂದ ತಲ್ಲಣಿಸಿದ ಮುಖ ಹೊತ್ತ ಆಗಂತುಕನ ಬಾಯಿಂದ ಬಂತು ಆತುರದ ಪ್ರಶ್ನೆ.

"ಮೈ ಫ್ರೆಂಡ್, ನನ್ನ ಮಗ, ಈ ಸುರೇಶನ ಕೈಲಿದ್ದ 10,000 ರೂ. ಹಣನೂ ದೋಚಿ ಅವನ ಕೊಲೆ ಮಾಡ್ಬಿಟ್ಟಿದ್ದಾರೆ ಈ ಪಾಪಿಗಳು, ಆಗೋ ಅವನು ನಿಂಗೆ ಮೊದ್ಲೇ ಗುರ್ತ್ಲಲ್ವಾ ಎಂಥವನು ಅಂತ ಅವನೇ ಮಾಡಿರೋದು ಈ ಕೊಲೆ. ಈಗ ಫಿಟ್ಸ್ ಬಂದು ಸತ್ತಿದಾನೆ ಅಂತ ಹೆಣ ತಂದು ಹೇಳ್ತಿದ್ದಾನೆ"

ರಾಘವಪ್ಪ ತಾನೇ ಮುಂದಾಗಿ ಅವಸರದಲ್ಲಿ ಹೇಳತೊಡಗಿದ್ದನು ಗಮನಿಸಿ ಅದನ್ನು ಅರ್ಧಕ್ಕೆ ತಡೆದು, ಮುಂದೆ ಬಂದ ಪಿ. ಐ. ತಮ್ಮ ಸಂಶಯ ಹೊರಗೆಡವಿದರು.

"ಇವ್ರೇನಾ ರಾಘವಪ್ಪ ನೀವು ಹೇಳಿದ ಜಾರ್ಜ್ ? ಅಷ್ಟು ತಿಳಿಸಿ ಮೊದ್ಲು ನಮಗೆ, ನಾವೆಲ್ಲಾ ವಿಚಾರಿಸ್ಕೋತೀವಿ"

"ಹ್ಞಾ... ಹೌದು ನೋಡ್ರಿ ಇವ್ನೇ ಜಾರ್ಜ್.

"ಎಲ್ಲಿರೋದು ಜಾರ್ಜ್ ನೀವು" ? ಪಿ. ಐ. ಕೇಳಿದರು. ಜಾರ್ಜ್ ಹೆಣವನ್ನೇ ನೋಡುತ್ತ ಇಹದಿಂದ ದೂರ ಹೋದವನಂತೆ ಏನೋ ಯೋಚಿಸುತ್ತಾ ನಿಂತಿದ್ದ. ಒಮ್ಮೆ ಬೆಚ್ಚಿದವನಂತೆ, "ಅಂ" ಎಂದು, "ಇಲ್ಲೇ ಒಂದು ಫರ್ಲಾಂಗ್ ದೂರದ, ಇದರ ಆಗೋ ಆ ಬದಿಯ ರಸ್ತೆಯಲ್ಲಿ "ಕೈ ಮಾಡಿ ಮನೆ ಇರುವ ಸ್ಥಳ ತೋರಿದ ಜಾರ್ಜ್.

"ಜಾಜ್ ನಿಮ್ಗೆ ಇವರ ಪರಿಚಯವಿದೆಯೇ"? ದಯಾಕರನತ್ತ ಬೆಟ್ಟು ತೋರಿಸಿ ಕೇಳಿದರು ಇನ್ಸ್‌ಪೆಕ್ಟರ್ ಸಾಹೇಬರು.

"ಗೊತ್ತು", ಹುಬ್ಬು ಸಂಕುಚಿಸಿ, ಆಶ್ಚರ್ಯ ಸೇರಿಸಿ ಉತ್ತರಿಸಿದ ಜಾರ್ಜ್ ಆದ್ರೆ ಈಗ ಇವನ್ಯಾಕೆ ಇಲ್ಲಿ ? ಏನು ಕದ್ದು ಸಿಕ್ಕಿಬಿದ್ದ ?" ಎಂದು ಪ್ರಶ್ನಿಸುತ್ತಾ ರಾಘವಪ್ಪನ ಕಡೆ ನೋಡಿದ.

"ಎಷ್ಟು ವರ್ಷಗಳಿಂದ ಪರಿಚಯ ? ಹೇಗೆ ಪರಿಚಯ ಆಯ್ತು" ? ಪಿ. ಐ, ತಮ್ಮ ಪ್ರಶ್ನೆ ಮುಂದುವರಿಸಿದರು.

"ಪರಿಚಯ ಎಂದರೆ ಕಳ್ಳನಾಗೇ ಪರಿಚಯವಾದದ್ದು. ಅದು ಕಳೆದ ವರ್ಷ ನನ್ನ ಜೇಬಲ್ಲಿದ್ದ 2,000 ರೂ. ಕದ್ದು. 1,000 ರೂ.ನ್ನು ನೋಡಿ ಇದು ಬೀಳಿಸಿಕೊಂಡು ಹೋಗಿದ್ದೀರಿ. ಎಂದು ವಾಪಸ್ ತಂದು ಕೊಟ್ಟಾಗ ನಾನೂ ನಿಜ ಎಂದೇ ನಂಬಿ ಹೊಗಳಿ ವಂದಿಸಿ ಕಳಿಸುವವನಿದ್ದೆ. ಆದರೆ ನನ್ನ ಸ್ನೇಹಿತ, ಇವನು ಪಿಕ್‌ಪಾಕೆಟ್ ಮಾಡಿದ್ದನ್ನು ನೋಡಿದ್ದವ ನನಗೆ ನಿಜ ತಿಳಿಸಿದ ಆಮೇಲೆ ಚೆನ್ನಾಗಿ ಥಳಿಸಿ ಕಳಿಸಿದ್ದೆ, ಆಗ ರಾಘವಪ್ಪನೂ ನನ್ನ ಜೊತೆಗಿದ್ದರು,

"ಸುಳ್ಳು ಸುಳ್ಳು ಇವರನ್ನು ನಾನು ಇವತ್ತೇ ನೋಡ್ತಿರೋದು, ನಾನು ಕಳ್ಳನೇ ಅಲ್ಲ, ಎಂದೂ ಇನ್ನೊಬ್ಬರ ಒಂದು ದಮ್ಮಡಿಯನ್ನೂ ತೆಗೆದು ಕೊಂಡಿಲ್ಲ. ನೀವು ನನ್ನನ್ನು ಇನ್ಯಾರಿಗೋ ಮಿಸ್‌ಟೇಕ್ ಮಾಡಿಕೊಂಡಿರ ಬೇಕು ಮಿ॥ ಜಾರ್ಜ್. ನೀವು ತಿಳಿದುಕೊಂಡಿರುವ ಕಳ್ಳ ಮನುಷ್ಯ ನನ್ನ ಹಾಗೆ ಇದ್ದಿರಬಹುದಷ್ಟೇ, ನಾನಲ್ಲ", ಒತ್ತರಿಸಿದ ಸಿಟ್ಟನ್ನು ತಡೆದು ಗಂಬೀರವಾಗಿ ಹೇಳಲು ಪ್ರಯತ್ನಿಸಿ ಹೇಳಿದ ದಯಾಕರ,

ಜಾರ್ಜ್ ಹಿಂದೆ ನಡೆದ ಘಟನೆಯೊಂದನ್ನು ಎಲ್ಲಿ, ಹೇಗೆ, ಯಾವಾಗ ಎಂಬುದನ್ನು ಇನ್ನೊಮ್ಮೆ ವಿವರವಾಗಿ ವರ್ಣಿಸಿ ಹೇಳಿದಾಗ, ಆ ಒಂದೇ ಒಂದು ಕ್ಷಣ, ಸುಮಾಳ ಮನಸ್ಸಿನಲ್ಲೂ ಶಂಕೆಯ ಇಣುಕು. ಪರಿಚಯವೇ ಇಲ್ಲದವನ ಬಗ್ಗೆ, ಪೂರ್ವಯೋಜನೆಯೂ ಇಲ್ಲದೇ ಧಿಡೀರನೇ ಈಗ ತಾನೇ ಕಾಣಿಸಿಕೊಂಡ ವ್ಯಕ್ತಿ ಸುಳ್ಳು ಕತೆ ಕಟ್ಟಿ ಹೇಳಲು ಎಲ್ಲಾದರೂ ಸಾಧ್ಯವೇ ? ಡಿಗ್ರಿ ಪರೀಕ್ಷೆಯಲ್ಲಿ ರ್‍ಯಾಂಕ್ ತೂಗೊಳೋದಕ್ಕಿಂತ ಹೆಚ್ಚಿನ ಜಾಣ್ತನ ಇರ್ಬೇಕು ಇಂಥ ಸುಳ್ಳುಗಳನ್ನು ನಿಜವೆನಿಸುವ ಹಾಗೆ ಹೇಳಬೇಕೆಂದರೆ ಉಹೂ ಸುಳ್ಳು ಇರಲಾರದು" 4ನೇ ಮೇನ್‌ನಲ್ಲೇ ದಯಾ ಮೊದಲೊಮ್ಮೆ ಮನೆಗೆ ಬಂದದ್ದು. ಅದೇನೋ ಫೋಟೋ ಫಿಲಿಂ ತರಲೆಂದು ಹೋದವರು. ಮತ್ತೆ ಮನೆಗೆ ಬಂದ ಅರ್ಧ ಘಂಟೆಯೊಳಗೆ ಮೊದಲೇ ತಯಾರಾಗಿ ನಿಂತಿದ್ದ

ತನ್ನನ್ನು ಅದೇ ರಸ್ತೆಯಲ್ಲಿ ಕರೆದುಕೊಂಡು ಮಹಿಮಾಪುರಕ್ಕೆ ಹೊರಟಿದ್ದು, ಕಾರು ನಿಧಾನಿಸಿದ್ದು, ಇಣುಕಿದ್ದು, ನಿಲ್ಲಿಸಿದ್ದು, ಯಾರಿಗೆ ಗೊತ್ತು ? ಹೊರಗೆ ಹೋಗಿ ಬರುವಾಗ ಏನು ಮಾಡಿ ಬಂದಿದ್ದರೋ ? ಪ್ರವಾಸಕ್ಕೆ ಹಣ ಇರಲೀಂತ ಹೀಗೆ ಮಾಡಿರಬಹುದೇ ? ಇವರ ಶ್ರೀಮಂತಿಕೆಯೆಲ್ಲ ಇಂಥ ಹಣಗಳ ಶೇಖರಣೆಯಿಂದಲೇ ಮೆರೆದು ನಿಂತಿದೆಯೋ ಏನೋ ? ದಯಾಕರನ ಬಗ್ಗೆ ಹೆಚ್ಚು ಹೇಳಿಕೊಳ್ಳಲು ತನಗಾದರೂ ಏನು ಗೊತ್ತಿದೆ ? ಯಾರೋ ತೋರಿಸಿಕೊಟ್ಟ ಗಂಡು, ಮುಖ ನೋಡಿ ಒಪ್ಪಿದ್ದಷ್ಟೇ, ಈ 15 ದಿನಗಳಲ್ಲಿ ತಾನು ಕಂಡ ಅವನ ಸಹೃದಯತೆ. ವಿನಯ, ಉದಾರತೆಗಳೆಲ್ಲ ತಮ್ಮದು ಹೊಸ ಸಂಬಂಧ ಎಂಬ ಸಂತೋಷಕ್ಕಿರಬಹುದು, ಇಲ್ಲಾ ತಮ್ಮ ಕುಟುಂಬ ದವರ ಬಗ್ಗೆ ಮಾತ್ರವೇ ಇರಬಹುದು, ಅಥವಾ ಅತಿ ವಿನಯಂ ಧೂರ್ತ ಲಕ್ಷಣಂ ಎನ್ನುವಂತೆ, ಒಳಗಿನ ಧೂರ್ತತನವನ್ನು ಮುಚ್ಚಿಹಾಕಲು ಮಾಡಿದ ಅತಿವಿನಯದ ಸೋಗಿರಲೂಬಹುದು ಛೆ ; ತನ್ನನ್ನೂ ಪೇಚಿನಲ್ಲಿ ಸಿಲುಕಿಸಿ ಬಿಟ್ಟನೇ"?

ಮರುಕ್ಷಣವೇ ಸುಮನಾ ತನ್ನನ್ನೇ ಬೈದುಕೊಂಡಳು. "ಥೂ ಥೂ, ಏನು ಕೆಟ್ಟ ಯೋಚನೆ ತನ್ನದು ? ದಯಾಕರನಂಥ ಸದ್ಗುಣಿಯ ಬಗ್ಗೆ ಇನ್ನು ಗುಣವೇ ತಿಳಿಯದ ತನ್ನದೇ ಗಂಡನ ಬಗ್ಗೆ ಈ ಅನುಮಾನವೇ ? ಪಾಪ, ಛೀ",

"ಮಿಸೆಸ್ ದಯಾಕರ್. ನಿಮ್ಮ ಪತಿಯ ಗುಣ ಮತ್ತು ಸ್ವಭಾವಗಳ ಬಗ್ಗೆ ನಿಮ್ಮ ಹೇಳಿಕೆ ಏನು"? ಸುಮನಾಳನ್ನು ಕೊಂಚ ದೂರ ಕರೆದೊಯ್ದು ಕೇಳಿದರು ಇನ್ಸ್‌ಪೆಕ್ಟರ್.

"ಅವರನ್ನು ನಾನು ಮದುವೆಯಾಗಿ ಬರೀ 15 ದಿನಗಳಷ್ಟೇ ಆಗಿರೋದು. ಅದಕ್ಕೆ ಮೊದಲು 2 ಸಲ ನೋಡಿದ್ದು, ಏನೋ ಒಂದೆರಡು ಮಾತಾಡಿದ್ದಷ್ಟೆ. ಆದ್ರೆ ಈ 15 ದಿನಗಳಲ್ಲಿ ನಾನು ಕಂಡ ಹಾಗೆ ಅವರಲ್ಲಿ ಯಾವ ಚಿಕ್ಕ, ಪುಟ್ಟ ದುರ್ಗುಣ ಕೂಡಾ ಇಲ್ಲ, ಸ್ವಲ್ಪ ಮುಂಗೋಪಿ ಅಂತ ನಮ್ಮತ್ತೆ, ಮಾವ ಹೇಳ್ತಿದ್ರಾರೆ. ನಂಗೆ ಅದೂ ಗೊತ್ತಾಗಿಲ್ಲ ಇನ್ನೂ,

ಮತ್ತೆ, ಕಳ್ಳತನ, ಕೊಲೆಗಳಂತೂ ದೂರದ ಮಾತು" ಒಳಗೆ ಒಮ್ಮೆ ಸುತ್ತು ಹಾಕಿದ ಸಂಶಯವನ್ನು ಹೊರತೋರದೇ ಹೇಳಿದಳು ಸುಮನಾ.

ಆಮೇಲೆ ದಯಾಕರನನ್ನು ಸ್ವಲ್ಪ ದೂರ ಕರೆದೊಯ್ದು ನಿಲ್ಲಿಸಿಕೊಂಡು ಸುಮನಾಳ ನಡತೆ, ಹವ್ಯಾಸ, ಗುಣಗಳ ಬಗ್ಗೆ ಕೇಳಿದರು ಅದೇ ಇನ್ಸ್‌ಪೆಕ್ಟರ್ ದಯಾಕರನಿಗಾದರೂ ಗೊತ್ತಿದ್ದುದಷ್ಟೆ, ಆದರೂ, "ಮನೆಯಿಂದ ಒಬ್ಬಳೇ ಹೊರಗೆ ಎಲ್ಲೂ ಕಾಲಿಡದ ಅನನುಭವಿ ಹುಡುಗಿ, ಯಾವ ಪಾಪಕೃತ್ಯ ತಾನೇ ನಡೆಸಿಯಾಳು ಇನ್ಸ್‌ಪೆಕ್ಟರೆ ? ಈ ವಿಷಯದಲ್ಲಿ ಅವಳು ತುಂಬಾ ಇನ್ನೋಸೆಂಟ್" ಎಂದು ದಯಾಕರ, ತನ್ನ ಅನಿಸಿಕೆ ತಿಳಿಸಿದ.

ಪಿ. ಐ. ರವರ ಆದೇಶದಂತೆ ಅಲ್ಲಿಗೆ ಬಂದ ಅವರ ನೌಕರ ವರ್ಗದವರು ಅವಶ್ಯಕ ಮಹಜರುಗಳನ್ನು ಮಾಡಿ ಮುಗಿಸಿದ್ದರು. ತಮ್ಮ ಪ್ರಶ್ನೆಗಳು ಆ ಕ್ಷಣಕ್ಕೆ ಮುಗಿದಿದೆ ಎನಿಸಿದ ಪಿ. ಐ. ದಯಾಕರನಿಗೆ ಕೇಳಿದರು, "ದಯಾಕರ ನಮ್ಗೆ ಈಗ ಈ ಹುಡುಗ ಬಿದ್ದಿದ್ದ ಆ ಸ್ಪಾಟ್ ತೊರಿಸ್ತೀರಾ"?

ವಾಚ್ ನೋಡಿಕೊಂಡ ದಯಾಕರ. ಘಂಟೆ ರಾತ್ರಿಯ 12 ಘಂಟೆ. ಸುತ್ತಲೂ ಸೇರಿದ್ದ ಹತ್ತು ಹನ್ನೆರಡು ಜನರ ಗುಂಪು ಅದಾವಾಗಲೋ ಕಡಿಮೆಯಾಗಿ, ಜನ ಪೂರ್ತಿ ಖಾಲಿಯಾಗಿ ಹೋಗಿತ್ತು. ಮಾಹಿಮಾಪುರ ದಲ್ಲಿದಿದ್ದರೆ ಆಗಲೇ ಒಂದು ನಿದ್ದೆ ಮಾಡಿ ಮುಗಿಸಿಬಿಡಬಹುದಾಗಿದ್ದ ಸಮಯ. ಮನೆಗಾದರೂ ವಾಪಸ್ ಹೋಗಿದ್ದರೆ"...ಎಂದುಕೊಂಡ,

"ಈಗ್ಲೇ ಹೋಗ್ಬೇಕಾ ? ನಾವು ಮಾಹಿಮಾಪುರಕ್ಕೆ ಹೊರಟವರು: ಮಹಿಮಾಪುರಕ್ಕಂತೂ ಹೋಗಲು ಬಿಡಲ್ಲ, ಮನೆಗಾದ್ರೂ ಹೋಗ್ಬಹುದಲ್ಲಾ ? ನಾಳೆ ಬೆಳಿಗ್ಗೆ ತೋರಿಸಿದ್ರೆ ಆಗ್ದೇ ?" ತೀರ ಬೇಸರದಿಂದ ಕೇಳಿದ ದಯಾ, ನಿದ್ದೆಯನ್ನು ಹೊತ್ತವನಂತೆ ಆಕಳಿಸುತ್ತಾ,

"ಇವತ್ತೇ ಮಾಹಿಮಾಪುರಕ್ಕೆ ಕಾರು ತಲುಪಿಸಬೇಕಿತ್ತೋ ಏನೋ ? ಆಗಲಿಲ್ಲ ಅದು, ನಮ್ಗೆ ಮನೆಗೆ ಹೋಗೋಕೆ ಬಿಟ್ಬುಬಿಡಿ ಇನ್ಸ್‌ಪೆಕ್ಟರೇ. ಈ ಹೊತ್ತಿನಲ್ಲಿ ಅಲ್ಲೇನು ಕಾಣಿಸುತ್ತೆ ನಿಮ್ಗೆ, ಅ ಜಾಗ ಹುಡುಕೋದೂ

ಕಷ್ಟ ನಮ್ಗೆ ಈಗ, ಬೆಳಿಗ್ಗೆ ಎಲ್ಲೂ ಹೋಗಲ್ಲ, ಆ ಜಾಗ, ಬೆಳಿಗ್ಗೆ ತೋರಿಸಿದ್ರೆ ಆಗದೇ ? ಸುಮಾ, ಗಂಡನ ಮಾತಿಗೆ ಒತ್ತುಕೊಟ್ಟಳು.

"ಜಾಗ ಎಲ್ಲೂ ಹೋಗಲ್ಲ ಮೇಡಂ, ಆದ್ರೆ ಈಗಿದ್ದ ಹಾಗೇ ಉಳೀದೇ ಹೋದ್ರೆ ? ಇನ್ಸ್‌ಪೆಕ್ಟರರ ಅನುಮಾನ.

"ಬೆಳಿಗ್ಗೆ 6 ಘಂಟೆಗೇ ತೋರಿಸ್ತೀನಿ ಬೇಕಾದ್ರೆ. ನಡುರಾತ್ರೀಲಿ ತನಿಖೆ ನಡೆಸೋದು, ಫೋಟೋಸ್ ತೊಗೊಳೋದೂ, ಮಾಡ್ತಾರೆ ಅಂತ ನಂಗಂತೂ ಗೊತ್ತಿರ್ಲಿಲ್ಲ, ಈ ಕತ್ಲಲ್ಲಿ ಏನು ನೋಡೋಕೆ ಆಗುತ್ತೆ ಅಲ್ಲಿ" ದಯಾಕರ ಹೇಳಿದ.

"ಈಗ ಗೊತ್ತಾಯ್ತಲ್ಲ, ಇಂಥ ಪ್ರಕರಣದ ಪರಿಸ್ಥಿತಿಯಲ್ಲಿ ಹಗಲು, ರಾತ್ರಿ ಲೆಕ್ಕಿಸದೇ ನಮ್ಮ ಕೆಲಸ ಮಾಡ್ತೀವಿ ಅಂತ, ನಡೀರಿ, ಕೊಲೆ ಮಾಡ ದಿದ್ದವರಿಗೆ ಭಯ ಯಾಕೆ ? ಜಾಗ ತೋರ್ಸೋಕೆ" ? ಪಿ. ಐ. ರವರು ಕೇಳಿ ದಾಗ, "ಭಯ ಯಾರಿಗಿದೆ, ಬೇಜಾರಷ್ಟೇ" ಎಂದು ಗೊಣಗಿದ ಸುಮನಾ ಮುಂದೆ ಮಾತಾಡಲು ಇಷ್ಟ ಪಡದೇ ಸುಮ್ಮನೇ ನಿಂತಳು. "ಆಯ್ತು ನಡೀರಿ, ಬಾ ಸುಮ" ಎಂದು ತುಂಬ ಬೇಸತ್ತವನಂತೆ ಹೇಳಿ ಹೆಂಡತಿ ಯೊಡನೆ ಕಾರು ಹತ್ತಿದ ದಯಾಕರ. ಅಂಗಳದಲ್ಲಿದ್ದ ಶವವನ್ನು ಪೋಲೀಸ್ ವ್ಯಾನ್‌ಗೆ ವರ್ಗಾಯಿಸಲಾಯಿತು. ಮರುದಿನ ಬೆಳಿಗ್ಗೆ ಆ ಶವವನ್ನು ಹತ್ತಿರದ ಸಿವಿಲ್ ಸರ್ಜನ್‌ಗೆ ಪರೀಕ್ಷೆಗೆ ಕಳಿಸಲಾಗುವುದೆಂದು ಸಬ್ ಇನ್ಸ್‌ಪೆಕ್ಟರ್ ಹೇಳಿದರು.

ಪಿ.ಐ, ಮತ್ತು ಇಬ್ಬರು ಕಾನ್‌ಸ್ಟೇಬಲ್‌ಗಳು ದಯಾಕರನ ಕಾರಿನಲ್ಲೇ ಹತ್ತಿಕೊಂಡರು. ಉಳಿದ ಇಬ್ಬರು ಪೇದೆಗಳು ಮತ್ತು ಫೋಟೋಗ್ರಾಫರ್ ಹಾಗೂ ಇನ್ನೊಬ್ಬ ಸಹಾಯಕ ಇತ್ಯಾದಿಗಳೆಲ್ಲ ಆಮೇಲೆ ಒಬ್ಬೊಬ್ಬರಾಗಿ ಬಂದು ಕಾಣಿಸಿಕೊಂಡವರು ಹಿಂದೆ ಶವವನ್ನು ಸಾಗಿಸಿ ಬಂದ ವ್ಯಾನ್‌ನಲ್ಲಿ ಕುಳಿತರು.

ಗಂಡ ಹೆಂಡತಿಯರು ಯಾವ ಮಾತೂ ಆಡಿಕೊಳ್ಳದಂತೆ ನೋಡಿ ಕೊಳ್ಳಲೆಂದೋ ಏನೋ. ಐ.ಪಿ.ರವರು, ಸುಮಾಳನ್ನು ಇತರ ಇಬ್ಬರೊಂ ದಿಗೆ ಹಿಂದೆ ಕೂಡಲು ಹೇಳಿ ತಾವು ದಯಾನ ಪಕ್ಕದಲ್ಲೇ ಕುಳಿತರು. ರಾಘ ವಪ್ಪನ ಮನೆಯ ಬಳಿ ಇಬ್ಬರು ಪೇದೆಗಳನ್ನು ಪಹರೆಗೆ ನಿಲ್ಲಿಸಿ, ಕಾರು ನಡೆ ಸಲು ಅನುಮತಿ ನೀಡಿದರು ಅವರು.

ದಯಾಕರನ ತಲೆಯೊಳಗೆ ನೋವಿನ ಸಿಡಿದಾಟ, ಕಣ್ಣಿನ ರೆಪ್ಪೆಯ ಮೇಲೇ ಕುಳಿತ ನಿದ್ದೆಯ ಕಾಟ, "ಎಲ್ಲಿಯ ಗ್ರಹಚಾರ ಗಂಟು ಬಿತ್ತಿದು?" ನಾಳೆ ಬೆಳಿಗ್ಗೆಯಾದರೂ ಮಹಿಮಾಪುರಕ್ಕೆ ಹೊರಡಲು ಆಗುತ್ತೋ ಇಲ್ಲವೋ? ಪಾಪ. ಪ್ರೋಗ್ರಾಮ್ ಕ್ಯಾನ್ಸಲ್ ಆದ್ರೆ ಸುಮಾಗೆ ಎಷ್ಟು ಬೇಜಾ ರಾಗುತ್ತೋ? ಖರ್ಚು ಎಷ್ಟೊಂದು ಮಾಡಿದ್ದೆಲ್ಲ ವ್ಯರ್ಥವಾಗಬಹುದು, ಕೊಲೆ ತಾವು ಮಾಡಿದ್ದಂತೆ; ಅಬ್ಬಬ್ಬ ಎಂಥ ಮಹತ್ ಆಪಾದನೆ! ಎಷ್ಟು ದೊಡ್ಡ ಅಪರಾಧ; ಸುಳ್ಳೊಂದನ್ನು ಹೇಳಲಾಗದ ಪಾಪದವರ ಮೇಲೆ? ಅಕಸ್ಮಾತ್ ಸಾಬೀತಾದರೆ ಜೀವಾವಧಿ ಕಾರಾಗೃಹವಾಸ ಅನುಭವಿಸಬಹುದಾ ದಂಥ ಮಹಾ ಅಪರಾಧ? ಹಾಯ್ ಯಾವ ಕರ್ಮ ಇದು? ಹುಂ ನಾಳೆ ಯೊಳಗೆ ಹೇಗಾದರೂ ಮಹಿಮಾಪುರ ತಲುಪಿ, ಇವರಿಂದ ಬಿಡುಗಡೆಯಾಗಿ ಬಿಟ್ಟರೆ, ಆಮೇಲೆ ಒಂದು ತಿಂಗಳು ಈ ಜನಗಳ ಕಣ್ಣಿಗೆ ಕಾಣದಂತೆ ಇದ್ದು ಬರಬಹುದು. ಆಮೇಲೆ ಏನೇ ವಿಚಾರಣೆ ನಡೆಸಿದ್ರೂ ಅಡ್ಡಿ ಇಲ್ಲ, ಅಲ್ಲೀ ತನಕ ಹಾಳಾಗಿ ಹೋಗ್ಲಿ ಈ ಕೇಸ್. ಸದ್ಯ ಇದರಿಂದ ಕೈ ಬಿಡಿಸಿಕೊಂಡರೆ ಸಾಕು ಒಮ್ಮೆ" ಎಂದು ಯೋಚಿಸುತ್ತಾ, ಕೊರಗುತ್ತಲೇ ಕಾರು ಓಡಿಸಿದ.

ಬೃಂದಾ ಟಾಕೀಸಿನಿಂದ ಮುಂದೆ, ನಲವತ್ತೈದೋ ಐವತ್ತೋ ಕ್ರಾಸಿನ ವರೆಗೆ ಉದ್ದಕ್ಕೂ ಒಂದೇ ರೀತಿ ಇರುವ ಸುಮಾರು 2/3 ಮೈಲುಗಳ ಅಂತ ರದ ದಾರಿ ಅದು. ಆ ಜಾಗವನ್ನು ಗುರುತಿಸಲು ಸಹಾಯಿಸುವ ಅಂಗಡಿ ಅಥವಾ ಮನೆ, ಬೋರ್ಡುಗಳು ಯಾವುದೂ ಇಲ್ಲ, ಹ್ಹಾ ಜರ್ಮನ್ ಗಾರ್ಡನ್ ದಾಟಿ ಇನ್ನೂ ಮುಂದೆ, ತುಂಬಾ ಮುಂದೆ ಎಲ್ಲೋ ಒಂದು ಕಡೆ ಮೊದಲೇ ಯಾವ ಅಡ್ಡರಸ್ತೆ, ಯಾವ ಮುಖ್ಯ ರಸ್ತೆ ಎಂದು ತಿಳಿದುಕೊಂಡಿ ರಲು ಅವನೇನು ಬಿದ್ದವನನ್ನು ಹುಡುಕಿಕೊಂಡು ಬಂದಿರಲಿಲ್ಲವಲ್ಲ. ಎಲ್ಲೋ

ಬಿದ್ದಿದ್ದ, ಅಷ್ಟೇ ಗೊತ್ತು. ಅವನು ಪ್ರತಿದಿನ ಓಡಾಡುವ ದಾರಿಯೂ ಅಲ್ಲ ಅದು, ಚೆನ್ನಾಗಿ ಗುರುತು ಹಿಡಿಯಲು. ಅವನ ಮನೆ ಮಾರುತಿ ಗುಡ್ಡದ ಹಿಂದೆ, ಬ್ಯಾಂಕ್ ಇರುವುದು ಇನ್ನೆಲ್ಲೋ, ಈ ರಸ್ತೆಯಲ್ಲಿ ಈ ದಿನವೇ ಬಂದಿದ್ದಷ್ಟೇ. "ಅಂದ ಹಾಗೆ, 3ನೇ ಮೇನ್‌ನಲ್ಲಿ ಪಾರ್ಕಿನ ಆಚೆ ಬದಿಗೆ ಕೆಂಪು ಬಣ್ಣದ ಮನೆಯೊಂದು, ಅಲ್ಲಿ ನಿಂತಾಗ ಕಾಣಿಸಿತ್ತು, ಎನಿಸಿ ದೃಢಪಡಿಸಿಕೊಳ್ಳಲು ಸುಮಾಗೆ ಕೇಳಿದ.

"ಸುಮಾ, ಸುರೇಶ್ ಬಿದ್ದ ಜಾಗದ ಆಚೆ ರಸ್ತೆಯ ಎದುರಿಗೆ ಕೆಂಪು ಗೋಡೆಯ ಮನೆಯೊಂದು ಇದ್ದ ಹಾಗಿತ್ತಲ್ಲಾ?"

"ಏನೋ ನಾನು ನೋಡ್ಲಿಲ್ಲಪ್ಪ" ಸ್ವಲ್ಪ ಹೊತ್ತು ಯೋಚಿಸಿ ನಂತರ ಉತ್ತರಿಸಿದಳು, ಸುಮಾನ "ನಂಗಂತೂ ಇಲ್ಲಿ ಯಾವ ರಸ್ತೆನೂ ಗೊತ್ತಿಲ್ಲ, ಏರಿಯಾದ ಹೆಸರೂ ತಿಳಿದಿಲ್ಲ" ಉತ್ತರಿಸಿದವಳು ಬೇಸರದಿಂದ ನಿಟ್ಟುಸಿರಿಟ್ಟಳು.

ರಾತ್ರಿಯ ಹನ್ನೆರಡೂವರೆ ಘಂಟೆ, 34ನೇ ಅಡ್ಡರಸ್ತೆ, ಬರಬಹುದಾದ ಒಂದು ಜಾಗದಲ್ಲಿ ಬೀದಿ ದೀಪದ ಬಳಿ ಕಾರು ನಿಲ್ಲಿಸಿ, ಇಲ್ಲೇ ನೋಡಿ ಎಂದ ದಯಾಕರ, ಕೆಳಗಿಳಿದು, ಸುತ್ತ ಗಮನಿಸಿ,

"ಅಲ್ಲಲ್ಲ, ಸಾರಿ, ಸಾರಿ, ಮುಂದಿನ ದೀಪದ ಕಂಬದ ಅಡಿ" ಎಂದು ಮತ್ತೆ ಕಾರಿನೊಳಗೆತೂರಿದ.

ಕೆಳಗಿಳಿಯ ಹೊರಟ ಇನ್‌ಸ್ಪೆಕ್ಟರು, ಕಾಲು ಒಳಗೆಳೆದುಕೊಂಡು, ಸರಿಯಾಗಿ ಕೂತರು ಪುನಃ. ಮುಂದಿನ ದೀಪದ ಕಂಬದ ಬಳಿಗೆ ಕಾರು ಚಲಾಯಿಸಿ, ಅಲ್ಲಿ ನಿಲ್ಲಿಸಿ,

"ಇದೇ ಜಾಗ ಸಾರ್" ಎಂದು ತೋರಿಸಿದ ದಯಾಕರ.

ಪೋಲೀಸ್ ದಂಡು ಕೆಳಗಿಳಿದು, ಸುತ್ತಮುತ್ತಲ ಜಾಗದ ಪರೀಕ್ಷೆ ಮಾಡಿತು. ಅಲ್ಲಿದ್ದ ಕಲ್ಲು, ಚರಂಡಿ, ದೀಪದ ಕಂಬಗಳನ್ನೂ ಗುರುತಿಸಿ ಕೊಂಡಿತು. ಫೋಟೋಗ್ರಾಫರ್ ಸುತ್ತ ತಿರುಗಿ, ಆ ಜಾಗದ್ದೂ ಮತ್ತು ದಯಾಕರ ಮೊದಲು ತೋರಿಸಿದ್ದ ಜಾಗದ್ದೂ ಸ್ನ್ಯಾಪ್ಸ್ ತೆಗೆದುಕೊಂಡ, ಆ

ದೀಪದ ಬೆಳಕಿನಡಿಯೇ "ನಾವೆಲ್ಲಿ ಈ ಜಾಗವನ್ನು ಕ್ಲೀನ್ ಮಾಡಿಸಿಬಿಡು ತ್ತೇವೋ ಎಂದು ಭಯವೋ ಏನೋ, ಈ ಕತ್ಲಲ್ಲೇ ಮಹಜರ್‌ನೂ ನಡೆ ಸೋದಲ್ದೇ ಸ್ನಾಪ್ಸ್‌ನೂ ತೊಗೊಳ್ತಿದ್ದಾರೆ" ಕಾರಿನ ಬಳಿ ಬಂದು ನಿಂತ ದಯಾಕರ ಒಳಗೆ ಕೂತಿದ್ದ ಸುಮಾಗೆ ಹೇಳಿದ.

ಮಹಜರೆಲ್ಲ ಮುಗಿದ ಮೇಲೆ ಇನ್ಸ್‌ಪೆಕ್ಟರ್‌ವರು, ದಯಾಕರನ ಮನೆಯ ವಿಳಾಸ ಕೇಳಿದರು. ಮತ್ತೊಮ್ಮೆ ದಯಾಕರ ಏಕೋ ವಿಳಾಸ ಹೇಳಲು ಅನುಮಾನಿಸಿದ. ಮೊದಲೊಮ್ಮೆ ರಾಘವಪ್ಪನ ಮನೆಯ ಹತ್ತಿರ ಕೇಳಿದಾಗ ಮಾರುತಿ ಗುಡ್ಡದ ಬಳಿ ಎಂದಷ್ಟೇ ಹೇಳಿ ಮುಗಿಸಿದ್ದ. ವಯ ಸ್ಸಾದ ತಂದೆ, ರಕ್ತದ ಒತ್ತಡ ಇರುವ ತಾಯಿ, ಇಬ್ಬರೇ ಮನೆಯಲ್ಲಿರುವಾಗ ಈ ಪೋಲೀಸ್ ತಂಡ ಮನೆಗೆ ವಿಚಾರಣೆಗೆ ಹೋದರೆ, ಅವರು ಹೆದರಿ ಕೊಳ್ಳಬಹುದೇ ಎಂದೊಮ್ಮೆ ಯೋಚಿಸಿದ. ಈಗ ಈ ನಡುರಾತ್ರಿ, ಮಹಿಮಾಪುರಕ್ಕೆ ಹೊರಟ ತಾವು, ಪೋಲೀಸಿನವರ ಬೆಂಗಾವಲಿನಲ್ಲಿ ಮನೆಗೆ ಹಿಂತಿರುಗಿದರೆ ತಾಯಿಗೆ ಅದೆಷ್ಟು ಗಾಬರಿಯಾಗಬಹುದು, ಸುಮಾಳ ಕಡೆ ಗೊಮ್ಮೆ ನೋಡಿದ ಮತ್ತು ಆಲೋಚಿಸಿದ.

"ಯಾಕೆ ಹೇಳಿ ವಿಳಾಸ ಈಗ್ಲೇ ಬೇಕಾ? ನಾವಿಲ್ಲದಾಗ ಮನೆಗೆ ಹೋಗಿ ನಮ್ಮ ತಂದೆ ತಾಯಿಗಳ ತಲೆ ಕೆಡಿಸಬೇಡಿ ಸಾರ್ ಹೇಳ್ತೀನಿ ವಿಳಾಸ" ಎಂದು ನಿಧಾನವಾಗಿ ಹೇಳಿದ ದಯಾಕರ, "ಬರೆದುಕೊಳ್ಳಿ, "ನಂ. ಎಂದು ಆರಂಭಿಸುವಾಗಲೇ,

"ವಿಳಾಸ ಇರಲಿ ಬಿಡಿ, ಮನೆಗೇ ಹೋಗೋಣ ನಡೀರಿ ಈಗ್ಲೇ" ಎಂದರು ಇನ್ಸ್‌ಪೆಕ್ಟರ್ ದಯಾಕರನ ಮುಖದ ಮೇಲಿನ ಅನುಮಾನ ಗಮನಿಸಿ.

"ಛೆ, ಛೆ ಎಲ್ಲಾದ್ರೂ ಉಂಟೇ? ಈ ಹೊತ್ನಲ್ಲಿ ನೀವು ಬೇಡ" ನಾವಿಬ್ರೇ ಹೋಗಿ, ಮೊದಲು ನಮ್ಮ ಅಪ್ಪ, ಅಮ್ಮನಿಗೆ ವಿಷಯ ತಿಳಿಸಿ, ಸಮಾಧಾನ ಮಾಡಿರ್ತೀವಿ. ನೀವು ಬೆಳಿಗ್ಗೇನೆ ಬಂದ್ಬಿಡಿ ಬೇಕಾದ್ರೆ, ಅಥ್ವಾ ನಾವೇ ನಿಮ್ಮಲ್ಲಿಗೆ ಬೇಕಾದಾಗ ಬರ್ತೀವಿ" ಎಂದ ಏನು ಮಾಡಲೂ ತಿಳಿಯದೆ ದಯಾಕರ.

ಪಿ.ಐ.ನ ಕಣ್ಣಂಚಿನ ಅನುಮಾನ ಈಗ ಮುಖದಗಲಕ್ಕೂ ಹರಡಿತು.

"ಈಗ್ಲೇ ಹೋಗ್ಬೇಕು. ಮನೆ ನೋಡಿ ಬರ್ತೀವಿ, ನಡೀರಿ ಹೋಗೋಣ" ಎಂದರು.

ಬಾಗಿಲು ತೆಗೆದ ದಯಾಕರನ ತಂದೆ ವಸಂತರಾವ್‌ಗೆ, ನಡುರಾತ್ರಿಯಲ್ಲಿ ಹಿಂದಿರುಗಿ ಬಂದ ಮಗ ಸೊಸೆಯನ್ನು ಕಂಡು ಎಷ್ಟು ಆಶ್ಚರ್ಯವಾಯಿತೋ, ಅವರ ಜೊತೆಗಿದ್ದವರನ್ನು ಕಂಡು ಅಷ್ಟೇ ಗಾಭರಿ ಮತ್ತು ಭಯವೂ ಆಯಿತು. ಏನೋ ಅಪಘಾತ ಮಾಡಿಬಿಟ್ಟಿದ್ದಾರೆ ಈ ಮಕ್ಕಳು ಎಂದು ನಿರ್ಧರಿಸಿಬಿಟ್ಟಿತು ಅವರ ಮನಸ್ಸು. ದಯಾಕರ ತನ್ನದೇ ರೀತಿಯಲ್ಲಿ, ಒಳ್ಳೆಯ ಮಾತಿನಲ್ಲಿ, ಅವರಿಗೆ ನಡೆದ ಘಟನೆಯ ಬಗ್ಗೆ ವಿವರಿಸಿ, ಭಯಪಡುವಂಥದು ಏನೂ ಇಲ್ಲ ಎಂದು ಸಮಾಧಾನ ಹೇಳಿದ. ಸುಮನಾಳೂ ಮನೆಯೊಳಗೆ ಕಾಲಿಟ್ಟವಳೇ ಅತ್ತೆಯ ಕೋಣೆಗೆ ಹೋಗಿ ಎದ್ದು "ಯಾರು ಬಂದಿರಬಹುದು?" ಎಂದು ಯೋಚಿಸುತ್ತ ಕೋಣೆಯಲ್ಲಿ ಕುಳಿತಿದ್ದ ಅತ್ತೆಗೆ ಯಾವುದೋ ಒಂದು ರೀತಿಯಲ್ಲಿ ವಿವರಿಸಿ, ನಡೆದ ಘಟನೆ ತಿಳಿಸಿ ಸಮಾಧಾನ ಹೇಳಿ ಹೊರಬಂದಳು.

ಮಗ, ಸೊಸೆಯ ಅಂದಿನ ದಿನಚರಿಯ ಬಗ್ಗೆ, ಮನೆ ಬಿಟ್ಟ ಸಮಯ ಸಂದರ್ಭ ಮತ್ತು ಕಾರಣಗಳನ್ನೂ ಕೇಳಿ ಸಂಕ್ಷಿಪ್ತ ಮಾಹಿತಿ ಪಡೆದ, ಪಿ.ಐ. ರವರು, ತಾವು ಪುನಃ ಬರುವುದಾಗಿ ತಿಳಿಸಿ, ತಮ್ಮೊಡನೆ ಕರೆತಂದ ಪಿ. ಸಿ. ಗಳಲ್ಲಿ ಇಬ್ಬರನ್ನು ಅಲ್ಲಿ ಕಾವಲು ಹಚ್ಚಿ, ಹಿಂದಿರುಗಿ ಹೊರಟರು.

ಮಗ ಸೊಸೆ ಊರಿಗೆಂದು ಹೊರಟ ಮೇಲೆ ತಮಗಾದ ಬೇಸರದ ಬಗ್ಗೆ ಆ ಹುಡುಗನಿಗೆ ನಿಜವಾಗಿಯೂ ಫಿಟ್ಸ್ ಇರಲಿಲ್ವೇ ಎಂಬ ಬಗ್ಗೆ, ಯಾರನ್ನೋ ಕೊಲೆಗಾರ ಎನ್ನುವ ಆಪಾದನೆ ಹಾಕಿದರೆ ಅವನಿಗೇನು ಲಾಭ ಎನ್ನುವುದರ ಬಗ್ಗೆ, ಯಾರಾದರೂ ಕೊಲೆ, ಸತ್ಯವಾಗಲೂ ಮಾಡಿರಬಹುದೇ ಎಂಬ ಬಗ್ಗೆ ಮನೆಯಲ್ಲಿ ಮತ್ತೆ ಮಾತುಕತೆ. ಅವರವರಲ್ಲೇ ಬಿಸಿಹಸಿ ಚರ್ಚೆ. ಎಂದೂ ಯಾರಿಗೂ ಉಪಕಾರ ಮಾಡಲು ಹೋಗಲೇಬಾರದೆಂಬ ನಿರ್ಧಾರ, ಹೀಗೆ ಏನೋ ಚಿಕ್ಕ ಸಹಾಯ ಮಾಡಿ ತಮಗೇ ಕಷ್ಟ ತಂದುಕೊಂಡ ಒಂದೆ

ರಡು ಅನುಭವಿತ ಘಟನೆಗಳ ವರದಿ ತಂದೆ ತಾಯಿಗಳದು. ಅಂತೂ ಆ ರಾತ್ರಿ ಉಳಿದ ಒಂದೆರಡು ಘಂಟೆಗಳ ಅವಧಿಯಲ್ಲಿ, ಮಲಗಿದರೆ, ತಲೆಗಂಟಿನ ನೋವು ಶಮನಗೊಂಡಿತು ಎನ್ನುವ ನಂಬಿಕೆಯಿಂದ ಎಲ್ಲರೂ ಮಲಗಿದರು.

ಮರುದಿನ ಬೆಳಿಗ್ಗೆ 9 ಘಂಟೆಗೆ ಕಾಲಿಂಗ್‌ಬೆಲ್ ಶಬ್ದಕ್ಕೆ ಎಚ್ಚೆತ್ತ ದಯಾಕರ ಬಾಗಿಲು ತೆರೆದರೆ, ಇನ್ನೂ ಆರದ ತಲೆನೋವನ್ನು ಹೆಚ್ಚಿಸುವ ಪಿ.ಸಿ.ಯ ದರ್ಶನ, "ಏನ್ರೀ ನಮ್ಮ ತನಿಖೆ ಮುಗೀಲಿಲ್ವ ಇನ್ನೂ, ಬನ್ನಿ ಒಳಗೆ" ಎಂದ.

"ಓಹ್ ಒಂದೇ ಒಂದು ದಿನಕ್ಕೆ ಮರ್ಡರ್ ಕೇಸಿನ ತನಿಖೆ ಮುಗಿ ಸೋಕೆ ಸಾಧ್ಯವಾ ಎಲ್ಲಾದ್ರೂ ? ಮಾಡಿದ ತನಿಖೆಯನ್ನು ಈ ದಿನ ಮತ್ತೊಮ್ಮೆ ಪರಿಶೀಲಿಸಬೇಕು".

"ಕೂತ್ಕೊಳಿ" ಎಂದು ಕುರ್ಚಿ ತೋರಿಸಿದ ದಯಾಕರ ಹೆಂಡತಿಗೆ ಕರೆದು, ತಲೆನೋವಿನ ಉಪಶಮನಕ್ಕ ಕಾಫಿ ತರಲು ಹೇಳಿ, ತಾನೂ ಮುಖ ತೊಳೆದು ಬರಲು ಹೊರಟ.

ಮನೆಯ ಸುತ್ತಲೂ ದೃಷ್ಟಿ ಹಾಯಿಸುತ್ತಾ, ದಯಾಕರನಿಗಾಗಿ ಕಾಯುತ್ತಾ ಕೂತ ಪೋಲೀಸ್ ಪೇದೆ. ಎಲ್ಲ ಅನುಕೂಲವುಳ್ಳ ಅಂದವಾದ ಬಂಗಲೆಯಂಥ ಮನೆ. ವಿಶಾಲವಾದ ವರಾಂಡ ಅದು, ಮೆರೂನ್ ಬಣ್ಣದ ಗೋಡೆಯ 2 ಮೂಲೆಗಳಲ್ಲಿ ವಿವಿಧ ರಂಗಿನ ನಿಜವಾದ್ದೆಂಬಂತೆ ಕಾಣುವ ಕೃತಕ ಹೂಗಳನ್ನಿಟ್ಟುಕೊಂಡು ಮಿರುಗುತ್ತಿರುವ ಹೂದಾನಿಗಳು, ಅದರ ಆಚೀಚೆಗೆ ಹೂದಾನಿಯಲ್ಲಿ ಹೂ ಸುರಿಯುತ್ತಿರುವಂತೇ ಚಾಚಿ ಕೈಯಲ್ಲಿ ಹೂ ಬೀಳಿಸುತ್ತ ನಿಂತ ಹುಡುಗಿಯರ ಪ್ರತಿಮೆಗಳು ಮೇಲಿನ ಛಾವಣಿಯಲ್ಲಿ ತೂಗುತ್ತಿರುವ, ನಾಲ್ಕು ಮೂಲೆಯಲ್ಲೂ ನಾಲ್ಕು ಬಂಗಾರ ಹೊಳಪಿನ ಹೂಗೊಂಚಲುಗಳು ಎದುರು ಬದುರು ಗೋಡೆಯ ಮೇಲೆ ವಿವೇಕಾನಂದ ಮತ್ತು ದೇವರ ಪಟಗಳು ಅದರ ಪಕ್ಕದಲ್ಲಿ ಒಪ್ಪವಾಗಿ ಕಾಣುವಂತೆ ಹಾಕಿದ ಒಂದೇ ಸೈಜಿನ ಚಿಕ್ಕ ಫೋಟೋಗಳು, ಆದರ ಪಕ್ಕದಲ್ಲಿ ಮನೆ ಜನಗಳದು, ಕೆಳಗೆ ಗೋಡೆಯ ಬದಿಯಲ್ಲಿ ಸಾಲಾಗಿ ಇಟ್ಟ ಆರು ಬೆತ್ತದ ಕುರ್ಚಿಗಳು ಮೇಲೆ ವೆಲ್‌ವೆಟ್ ಬಟ್ಟೆಗಳ ಚೀಲ ಹೊದ್ದ ದಿಂಬುಗಳು ಮುಂದಿನ ಅಂಗಳ

ದಲ್ಲಿ ಅತ್ತ ಇತ್ತ ಪುಟ್ಟ ಪುಟ್ಟ ಹೂದೋಟ ಬಲದಲ್ಲಿರುವ ಕೋಣೆಯ ಬಾಗಿಲಿಗೆ ಹೊನ್ನ ಬಣ್ಣದ ಜರಿ ಲೇಸುಗಳದೇ ಪರದೆ ಸುತ್ತ ತಿರುಗಾಡಿದ ಪೇದೆಯ ಕಣ್ಣುಗಳು ಆ ಮನೆಯುವರ ಶ್ರೀಮಂತಿಕೆಯ ಮಟ್ಟ ಎಷ್ಟು ಎಂದ ಊಹಿಸಿಕೊಂಡಿತು. ಅದೇ ಮನೆಯಲ್ಲಿರುವ ನಾಲ್ವರ ಮುಖದಲ್ಲೂ ಈ ಶ್ರೀಮಂತಿಕೆ ತೋರಿಸುವ ಕಳೆಯೇ ಇಲ್ಲವೇ ? ಎಷ್ಟು ಸಾಧಾರಣ ವ್ಯಕ್ತಿತ್ವ" ಎಂದುಕೊಂಡಿತ್ತು ಪೇದೆಯ ಮನಸ್ಸು.

"ಏನ್ರೀ, ನಮ್ಮನ್ನಂತೂ ಪೇಚಿಗೆ ಸಿಕ್ಕಿಸಿಬಿಟ್ಟದ್ದೀರಾ. ಏನೂ ಮಾಡ್ದೇ" ? ಒಳಗಿನಿಂದ ಬಂದು ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತಾ ಆರಂಭಿಸಿದ ದಯಾಕರ ಉರಿಯುತ್ತಿರುವ ತನ್ನ ಕಣ್ಣುಗಳನ್ನು ಹೊಸಕುತ್ತಾ ಇವೊತ್ತು ಮಧ್ಯಾಹ್ನ ಊಟಿಗೆ ಹೋಗಲು ಮಹಿಮಾಪುರದಿಂದ ಟಿಕೆಟ್ ಬುಕ್ ಮಾಡಿಸಿದ್ದಾಗಿದೆ, ಅಲ್ಲಿಂದ, ಮದ್ರಾಸ್, ಡೆಲ್ಲಿ ಕಾಶ್ಮೀರಗಳಿಗೆ ಹೋಗಲು ನನ್ನ ಸ್ನೇಹಿತರೇ ರಿಸರ್ವ್ ಮಾಡ್ಸಿಟ್ಟದಾರೆ, ಯಾವಾಗಲೋ ಮಹಿಮಾಪುರದ ಪ್ರೋಗ್ರಾಂ ಕ್ಯಾನ್ಸಲ್ ಆಗಿ ಹೋಯ್ತು, ಇನ್ನು ಸೀದಾ ಊಟಿಗೆ ಹೋಗೋಕಾದ್ರೂ ಬಿಡ್ತೀರೋ ಇಲ್ವೋ ? ಬಿಡ್ಲಿಲ್ಲಾಂದ್ರೆ ನಂಗೆ ಎಷ್ಟು ಲಾಸ್ ಗೊತ್ತಾ ? ಟ್ರಾವೆಲ್ಲಿಂಗ್ ಟಿಕೆಟ್ಸ್ ಕ್ಯಾನ್ಸಲ್ ಮಾಡಿಸಿದ್ರೆ ಅದೆಷ್ಟೋ ಪರ್ಸೆಂಟ್ ಹೋಗುತ್ತೆ, ಹೋಟೆಲ್‌ನಲ್ಲಿ ಬುಕ್ ಮಾಡಿಸಿದ್ದು ? ಈಗ ರೂಮ್ಸ್ ಸಿಗೋದೇ ಕಷ್ಟ, ಇವೊತ್ತು ಯಾರ ಜೊತೆಗಾದ್ರು ಮಹಿಮಾಪುರಕ್ಕೆ ಕಾರನ್ನಂತೂ ವಾಪಸ್ ಕಳಿಸಲೇಬೇಕು, ಇಲ್ಲದಿದ್ರೆ ಅವರಿಗಾಗೋ ನಷ್ಟವನ್ನು ನಾನೇ ಕೊಡ್ಬೇಕಾಗುತ್ತೆ, ನೋಡಿ, ಉಪಕಾರ ಮಾಡೋಕೆ ಹೋದ್ರೆ ಹೀಗಾ ಆಗೋದು ? ಕಾಲ ಯಾವ್ದೇ ಇರ್ಲಿ, ಜಗತ್ತು ಹೇಗೇ ಇರ್ಲಿ, ಜನ ಎಲ್ಲಾ ತರಹದವರೂ ಇದ್ದೇ ಇರ್ತಾರೆ. ಆ ರಾಸ್ಕಲ್ ನನ್ನನ್ನೇ ಮರ್ಡರರ್ ಅಂದುಬಿಡೋದಾ ? ನಮ್ಗೆ ಈ ತರಹದ ಮೋಸವೆಲ್ಲಾ ಗೊತ್ತೇ ಇರ್ಲಿಲ್ಲ, ನಗುತ್ತ ಆರಂಭಿಸಿದ ದಯಾಕರನ ಮಾತು ಗಂಭೀರವಾಗುತ್ತಾ ಹೋಗಿ, ಕೊನೆಗೆ ಸಿಟ್ಟು ಸುರಿಸಿತ್ತು".

"ಅದ್ನೇ ಮಾತಾಡೋಕೇ ಸಾರ್, ನಾನು ಬಂದಿದ್ದು, ನಿಮ್ಮ ಒಬ್ಬ ಹತ್ತಿರನೇ ಮಾತಾಡ್ಬೇಕು. ನಾನು, ಊಂ......." ಎಂದ. ಅತ್ತಿತ್ತ ನೋಡಿ ಇಲ್ಲೇ ಮಾತಾಡ್‌ಬೋದಾ" ಎಂದ ಪಿ.ಸಿ.

"ಏನು ರಹಸ್ಯ ಬಾಕಿ ಇದೆ ಇನ್ನೂ, ತಂದೆ-ತಾಯಿಗಳಿಗೆ ಎಲ್ಲಿಯಾದರೂ ಪಾಕ್ ಕೊಟ್ಟುಬಿಟ್ಟಾರು ಈ ಜನ; ಎಂದುಕೊಳ್ಳುತ್ತಲೇ ಒಳಕೋಣೆಗೆ ಕರೆದೊಯ್ದ ದಯಾಕರ, ಆ. ಪಿ. ಸಿ. ಯನ್ನು ನೆಲದ ಮೇಲಿನ ರತ್ನ ಗಂಬಳಿ, ಫೋಮ್ ಬೆಡ್ಸ್, ದೊಡ್ಡ ಕುರ್ಚಿಗಳ ಮೇಲೆ ಹಾಕಿದ ಹುಲಿ ಚರ್ಮದ ಚೀಲ, ಸಂಪೂರ್ಣವಾಗಿ ಶೃಂಗರಿಸಿ ಕೊಂಡು ನಿಂತಿದ್ದ ಆ ಕೋಣೆಯ ಬೆಡಗು ನೋಡಿ ದಂಗಾದ ಪಿ.ಸಿ. ಕುರ್ಚಿಯ ಮೇಲೆ ಜೋರಾಗಿ ಕೂತಾಗ' ಒಳಗಿನ ಮೆತುವಿಗೆ ಪೂರ್ತಿ ಕುಸಿದುಹೋದ.

"ಹ್ಞಾ, ಏನು ಹೇಳಿ ರಹಸ್ಯದ ವಿಷಯ" ದಯಾಕರ ಮೆಲ್ಲಗೆ ಹೇಳಿದರೂ, ತಾನು ಇದೀಗ ಕಂಡುಕೊಂಡ ಅವನ ಶ್ರೀಮಂತಿಕೆಯ ಗತ್ತಿನಲ್ಲಿ, ಅವರು ಗದರುತ್ತಿದ್ದಾನೆಂದೇ ಅನಿಸಿತು ಪಿ.ಸಿ. ಗೆ.

"ಏನಿಲ್ಲಾ, ಇವೊತ್ತು ರಾಘವಪ್ಪನ ಅಕ್ಕಪಕ್ಕದ ಮನೆಯುವರಿಂದ, ಅವರ ಪರಿಚಯದವರಿಂದ, ಅವರ ಗುಣ, ವೃತ್ತಿ ಇತ್ಯಾದಿಗಳ ಬಗ್ಗೆ ವಿಷಯ ಕಲೆಕ್ಟ್ ಮಾಡಿಕೊಳ್ತಾರೆ ಸಾರ್, ಆ ರಾಘವಪ್ಪ ಏನೋ ಆ ಮನೆಗೆ ಬಂದು ಹತ್ತು ತಿಂಗಳಾಯ್ತಂತೆ ಅಷ್ಟೆ ಹತ್ತು ತಿಂಗಳು ಅಂದ್ರೆ ಪಕ್ಕದವರಿಗೆ ಅವರ ವಿಷಯ ಏನೇನೂ ತಿಳಿದಿರೋಲ್ಲ ಅನಿಸುತ್ತೆ. ಈ ಮಹಾ ನಗರಗಳಲ್ಲಿ ವರ್ಷಗಟ್ಲೆ ಇದ್ರೂ ಇವು ತಮ್ಮ ನೆರೆಮನೆಯುವರು ಅನ್ನೋದೇ ಗೊತ್ತಿರಲ್ಲ, ಅಕ್ಕಪಕ್ಕದವರ ಬಗ್ಗೆ, ಇನ್ನು ಅವರ ಬದುಕಿನ ಸಮಾಚಾರ ಏನು ಗೊತ್ತಿರುತ್ತೆ"? ತನಿಖೆ ಅಂತೂ ಇವೊತ್ತು ಶುರುವಾಗಿರುತ್ತೆ—" ಪಿ.ಸಿ. ಮುಂದುವರಿಸುತ್ತಲೇ ಕೋಣೆಯಲ್ಲಿದ್ದ ಕುರ್ಚಿಯಲ್ಲಿ ಸರಿಯಾಗಿ ಕೂತ,

"ಎಲ್ಲಾ ತನಿಖೇನೂ ಮುಗ್ಸಿ, ಆಗ ತಾನಾಗೇ ಗೊತ್ತಾಗುತ್ತೆ, ನಾನಾಗಲೀ, ಸುಮಾ ಆಗಲೀ ಕೊಲೆಗಾರರಲ್ಲ ಅನ್ನೋದು, ಯಾರು ಮಾಡಿದ್ರೋ ಅಥವಾ ಇದು ಕೊಲೆನೇ ಅಲ್ವೋ ಏನೋ, ಎಲ್ಲಾ ವಿಚಿತ್ರ ಅನಿಸುತ್ತೆ ನಂಗೆ" ದಯಾಕರ ಹೇಳಿದ.

"ಇದು ಕೊಲೇನೇ ಅಲ್ಲ ಅನಿಸಬೋದು ಸಾರ್, ತನಿಖೆಗಳೆಲ್ಲ ನಡೀತಲೇ ಇರುತ್ತೆ, ನೀವು ಬೇಡವೇ ಬೇಡ ಅಂದ್ರೆ ತನಿಖೇನೇ ನಿಲ್ಲಿಸಬಹುದು;

ಸಂಕುಚಿಸಿದ ಹುಬ್ಬಿನ ನಡುವೆ ಕಿರಿದುಗೊಳಿಸಿದ ಕಣ್ಣುಗಳಲ್ಲಿ ಆಶ್ಚರ್ಯ ಸೂಚಿಸಿದ ದಯಾಕರ,

"ಹೇಗೆ? ನಾವಂತೂ ಕೊಲೆ ಮಾಡಿಲ್ಲ ಅಂದೆ, ಅನ್ನುತ್ತಲೇ ಇದ್ದೇವೆ, ತನಿಖೆ ಶುರುವಾಗಿರುವುದು ರಾಘವಪ್ಪನಿಗೋಸ್ಕರ ತಾನೇ? ಅವ್ನೇ ಬೇಡ ಅನ್ಬೇಕು, ನಾವು ಬೇಡಾಂದ್ರೆ ಹೇಗಾಗುತ್ತೆ?"

"ಆರೋಪ ಬಂದಿರೋದು ನಿಮ್ಮೇಲೆ ಸಾರ್, ಈ ಆರೋಪ ನಿಮಗೆ ಬೇಡ ಅನಿಸಿದ್ರೆ ನಿಮ್ಮ ಮರ್ಯಾದೆಗೆ. ಟೂರ್ ಪ್ರೋಗ್ರಾಂಗೆ ಯಾವ್ದಕ್ಕೂ ಧಕ್ಕೆ ಬರಬಾರ್ದೂಂತಿದ್ರೆ, ನೀವು ಈ ತನಿಖೆ ಮುಂದುವರಿಯದ ಹಾಗೆ ಮಾಡ್ಬೇಕು, ಮರ್ಯಾದೆ ಎಲ್ಲಕ್ಕಿಂತ ಮುಖ್ಯ ಸಾರ್. ನೀವೇ ಕೊಲೆಗಾರ ಎಂಬ ಅನುಮಾನ ಬಂದಿದೆ ಎಂದು ಪೇಪರಿನಲ್ಲಿ ಈಗ ಓದಿದ ಎಲ್ಲಾ ಜನರೂ, ನೀವಲ್ಲ ಎಂದು ಸಾಬೀತಾದುದನ್ನೂ ಓದೇ ಓದ್ತಾರೆ ಅಂದ್ಕೋಬೇಡಿ. ಬೇರೆಯವರ ಹೆಸರಿಗೆ ಕಳಂಕ ಹಚ್ಚುವಾಗ ಇರುವಷ್ಟು ಆಸಕ್ತಿ, ಅದನ್ನ ಅಳಿಸೋಕೆ ಇರೋಲ್ಲ, ಈ ಜನಗಳಿಗೆ. ಮುಂದೆ ಏನಾಯ್ತೂಂತ ಓದದೇ ಇರೋ ಜನ, ನೀವೇ ಮರ್ಡರರ್ ಅಂತ ತಮ್ಮ ಮನಸ್ನಲ್ಲಿ ಇಟ್ಕೊಳ್ತಾರೆ ಅಲ್ವಾ? ನೀವು ಮಾತ್ರ ಈ ಬಗ್ಗೆ ಯೋಚ್ನೆ ಮಾಡ್ಬೇಡಿ. ನಾನು ನಮ್ಮ ಪಿ. ಐ.ಗೆ ಹೇಳ್ತಿನಿ, ನೀವು ಸುಮ್ಮನಿದ್ರೂ ಕೇಸ್ ಇನ್ನೂ ರಾಮಾಯಣ ಆಗುತ್ತೆ. ಅದ್ಕೇ ಹೇಳ್ತಿದೀನಿ, ಆದ್ರೆ ......ಸ್ವ...ಲ್ಪ....ಖರ್ಚಾಗುತ್ತೆ ಅಷ್ಟೆ" ಎನ್ನುವಾಗ ಪಿ.ಸಿ.ಯ ಮುಖದಲ್ಲಿ ದೇಶಾವರಿ ನಗೆ.

ಎಲ್ಲವನ್ನೂ ಅರ್ಥಮಾಡಿಕೊಂಡ ದಯಾಕರ ಕುಪಿತನಾದ, "ಏನ್ ಮಾತಾಡ್ತಾ ಇದೀರಿ ಪೋಲೀಸಪ್ನೋರೇ" ಎಂದು ಗದರುವ ದನಿಯಲ್ಲಿ ಶುರು ಮಾಡಿದಾಗ, ಆ ಪಿ.ಸಿ.ಯೇ ಮತ್ತೆ ಹೇಳಿದ.

"ಬೇಜಾರು ಮಾಡ್ಬೇಡಿ ಸಾರ್, ಚೆನ್ನಾಗಿ ಅನುಕೂಲವಾಗಿದೀರಾ, ಅರಮನೆಯಂಥ ಮನೆ ಇದೆ......" ಎನ್ನುವುದನ್ನು ಅರ್ಧಕ್ಕೇ ಕತ್ತರಿಸಿ ದಯಾಕರ ಗದರುವಂತೆ ಹೇಳಿದ, "ಹು ಹ್, ಅನುಕೂಲವಾಗಿದೀರಾ ಅಂತ, ಈ ಹಣ ಗಳಿಸೋಕೆ ಸುರಿಸಿದ್ದು ನಮ್ಮ ಬೆವರು. ಈ ಮನೆ ಕಟ್ಟಿಸೋಕೆ ಸುಟ್ಟಿದ್ದು ನಮ್ಮ ಮೆದುಳು. ಈಗ ಕಣ್ಣಿಗೆ ಕಂಡಾಕ್ಷಣ ಯಾರಿಗೋ

ಕೊಟ್ಟು ಬಿಡೋಕೆ, ಸುಮ್ಮ ಸುಮ್ಮನೆ ಖರ್ಚುಮಾಡೋಕೆ ನಮ್ಮಲ್ಲೇನು ಕಪ್ಪುಹಣ ಕಟ್ಟಿಟ್ಟಿಲ್ಲರೀ" ಎನ್ನುವಾಗ ಮತ್ತೆ ಕರೆಗಂಟೆಯ ಶಬ್ದ. ಈಗ ಒಳಬಂದವರು ಪಿ.ಐ. ಶೇಖರ್ ಮತ್ತವರ ಕಡೆಯ ಸಹಾಯಕರು. ಅವರನ್ನು ಕಂಡೊಡನೆ, ಮಾತನಾಡುತ್ತಿದ್ದ ಪಿ.ಸಿ., ಎದ್ದು ನಿಂತು ಎಲ್ಲರಿಗೂ ನಮಸ್ಕರಿಸಿ,

"ನನ್ನ ಕೆಲ್ಸ ನಾನು ಮಾಡಿದೀನಿ ಸಾರ್, ಅವ್ರಿಂದ ನಿಜ ಹೊರ ಬರ್ರೋಕೆ ನೀವೇ ಸರಿ ಅನ್ಸುತ್ತೆ, ನಮ್ಮ ಮಾತಿಗೆಲ್ಲ.......ಹೆ ಹೆ ಹೆ...... ಆಗಲ್ಲ ಎಂದು ನಕ್ಕು ಪಿ. ಐ.ಗೆ ಹೇಳಿದ ಪಿ.ಸಿ. ಹೊರಗೆದ್ದು ಹೋಗಿ, ಅಲ್ಲಿ ಕಾವಲಿದ್ದ ಪಿ.ಸಿ.ಯೊಡನೆ ಹರಟುತ್ತ ನಿಂತ.

"ರಾತ್ರಿ ನೋಡಿದ ಆ ಜಾಗಕ್ಕೆ, ಹಗಲು ಭೇಟಿ ಕೊಡೋಕೆ ಬಂದಿದ್ವಿ" ಪಿ. ಐ. ಮಾತು ಆರಂಭಿಸಿದರು.

"ಕೂತ್ಕೊಳ್ಳಿ" ಬಿಗಿ ಮುಖದಲ್ಲೇ ಕುರ್ಚಿಗಳತ್ತ ಕೈ ತೋರಿದ ದಯಾಕರ. ಪೋಲೀಸ್ ಇನ್ಸ್‌ಪೆಕ್ಟರ್ ತಮ್ಮ ಜೊತೆ ಕರೆತಂದ ಸಹಾಯಕ ಇನ್ಸ್‌ಪೆಕ್ಟರಿಗೆ ಪರಸ್ಪರ ಪರಿಚಯ ಮಾಡಿಕೊಟ್ಟರು.

ದಯಾಕರ್. ನನ್ನ ಹೆಸರು ಶೇಖರ್. ಪೋಲಿಸ್ ಇನ್ಸ್‌ಪೆಕ್ಟರ್, ನಿನ್ನೆಯ ತುರ್ತು ಪರಿಸ್ಥಿತಿಯಲ್ಲಿ ಪರಿಚಯ ಕೊಡಲಾಗಲಿಲ್ಲ. ಇವ್ರು, ನಿಮ್ಮ ಕೂಲಿ ಪ್ರಕರಣದ ಬಗ್ಗೆ ಪತ್ತೆ ಮಾಡಲು ನನಗೆ ಸಹಾಯವಾಗುವ ಪೋಲೀಸ್ ಇನ್ಸ್‌ಪೆಕ್ಟರ್ ಸಾಗರ್ ಅಂತ. ಸತ್ಯಾಸತ್ಯವನ್ನು ಕಂಡುಹಿಡಿಯೋಕೆ ಬಂದವರು ನಾವು, ಶೇಕರ್ ಹೇಳಿದರು. "ಹಾ, ಇವ್ರೇ ನೋಡಿ ಸಾಗರ್ ದಯಾಕರ್ ಅಂದ್ರೆ–ನಿಮ್ಮ ಮಿಸೆಸ್ ಎಲ್ಲಿ ?" ಎಂದು ಸುಮನಾಳನ್ನು ಹೊರ ಕರೆಸಿ, "ನೋಡಿ ಇವ್ರು ಮಿಸೆಸ್ ದಯಾಕರ್" ಎಂದರು.

"ಮಿಸ್ಟರ್ ದಯಾಕರ್, ನೀವು ರಾತ್ರಿ, ಹೆಣಾನ ಕಾರಿಗೆ ಹಾಕಿಸ್ದಾಗ. ನಿಮ್ಮ ಜೊತೆ ಬಂದೋರು ಯಾರು"? ಎಂದು ಪುನಃ ಪ್ರಶ್ನೆ ಆರಂಭಿಸಿದರು ಪಿ. ಐ. ಶೇಖರ್‌ರವರು. "ಬೇಜಾರುಪಡ್ಬೇಡಿ. ಇಂಥ ಕೇಸ್‌ಗಳಲ್ಲಿ,

ಕೊಲೇನೇ ಹೌದೋ ಅಲ್ವೋ ಎಂದು ಕಂಡುಹಿಡಿಯೋಕೆ ನೂರು ಪ್ರಶ್ನೆ ಹಾಕಿದ್ರೆ, ಆಮೇಲೆ ಕೊಲೆ ಯಾರು ಮಾಡಿದ್ದು ಅನ್ನೋದಕ್ಕೆ ಸಾವಿರ ಬುದ್ಧಿ ಉಪಯೋಗಿಸಬೇಕಾಗುತ್ತೆ" ಶೇಖರ್ ತಮ್ಮ ಪ್ರಶ್ನೆಯ ನಂತರ ಪೀಠಿಕೆ ಹಾಕಿದರು. ದಯಾಕರನ ಶ್ರೀಮಂತಿಕೆ ಎತ್ತಿ ತೋರುವ ಮನೆಯ ಸುತ್ತ ಒಮ್ಮೆ ಕಣ್ಣಾಡಿಸುತ್ತ,"

"ನೀವು ಕೊಲೆ ಮಾಡಿಲ್ದೇ ಇರ್ಬಹುದು, ಸಹಾಯಕ್ಕೇ ಕೈ ಹಾಕಿರ ಬಹುದು ಅಂತ ನಮ್ಗೂ ಅನಿಸುತ್ತೆ....ಆದ್ರೂ...ಪ್ರೊಸೀಜರ್ ನಮ್ಗೊಂದು ಇರುತ್ತೆ ನೋಡಿ"? ಇನ್ಸ್‌ಪೆಕ್ಟರ್ ಸಾಗರ್ ಮಧ್ಯೆ ತಮ್ಮ ಮಾತು ತಿಳಿಸಿ ಅರ್ಧಕ್ಕೆ ನಿಲ್ಲಿಸಿದವರಂತೆ ಕಂಡಾಗ, ಅವರುಗಳ ಪ್ರಶ್ನೆ ಮರೆತು, ಪಿ. ಐ. ನ ಆ ಮಾತೇ ಮೆಲುಕು ಹಾಕಿದ ದಯಾಕರನಿಗೆ, ತನ್ನ ಮೈ ಮನಗಳ ಸುತ್ತ ತಂಗಾಳಿ ಬೀಸಿದ ಅನುಭವ "ಉಫ್ ; ಅಂತೂ ತಾನೂ ಕೊಲೆ ಮಾಡಿಲ್ಲ ಎನ್ನುವ ಅನಿಸಿಕೆ ತನಿಖಾಧಿಕಾರಿಗೆ ? ಕೊಲೆಯ ಪ್ರಕರಣವನ್ನು ಆರಂಭ ಮಾಡಬೇಕಾದ ಪಿ. ಐ.ಗೆ" ? ಆಸೆಯ ದನಿಯಲ್ಲಿ ಹುಬ್ಬೇರಿಸಿದ, "ನಿಜ ವಾಗ್ಲೂನ ಸಾರ್, ಹಾಗಾದ್ರೆ ನೀವೇ ಒಂದು ಮಾತು ಹೇಳಿ. ಆ ರಾಘವಪ್ಪನ ನಿಂದೆ ಸುಳ್ಳು ಎಂದು ಸತ್ಯ ಹೇಳಿಬಿಡಿ ಸಾರ್. ಅವನ ಪರ ವಾಗಿ ಯಾವ ವಕೀಲರಾದ್ರೂ ಯಾಕೆ ಬೇಕು ?" ಅಥ್ವಾ ಈ ಅನ್ಯಾಯವನ್ನ ಇಲ್ಲಿಗೇ ನಿಲ್ಲಿಸೋ ಹಾಗೆ ಏನಾದ್ರೂ...".

"ಹ ಹ ಹ" ದಯಾಕರನ ಮಾತಿಗೆ ಪಿ. ಐ. ಶೇಖರ್‌ದು ಹಗುರ ನಗು "ಬಟ್ ವಿ ಆರ್ ಹೆಲ್ಪ್‌ಲೆಸ್ ಯು ನೋ ? ವೆನ್ ದಿ ಕೇಸ್ ಈಸ್ ಫೈಲ್ಡ್, ಇಟ್ ವುಡ್ ಬಿ ಡಿಸೈಡೆಡ್ ಅಂಡ್ ಕ್ಲೋಸ್ಡ್ ಬೈ ದಿ ಕೋರ್ಟ್ ಓನ್ಲಿ. ಇಟ್ ಈಸ್ ನಾಟ್ ಸೊ ಈಸಿ ದಯಾಕರ್, ಟು ಕ್ಲೋಜ್ ದಿ ಕ್ರಿಮಿನಲ್ ಪ್ರೊಸೀಜರ್..."

ಪಿ. ಐ. ಶೇಖರ್‌ನ ಮಾತಿಗೆ ಪಕ್ಕದಲ್ಲಿದ್ದವರೂ ತಲೆ ಆಡಿಸಿ ಹೇಳಿ ದರು. "ಹೌದು ಮಿಸ್ಟರ್ ದಯಾಕರ್, ಈಗಾಗ್ಲೇ ಈ ಕೇಸ್ ಬಗ್ಗೆ ಎಫ್. ಐ. ಆರ್. ಫೈಲ್ ಮಾಡಿದ್ದಾಗಿದೆ. ನಿಮ್ಮ ಮೇಲೇ ಅನುಮಾನ ಬಲ

ಹಾಗೋ ಹಾಗೆ ಸಾಕ್ಷಿಗಳೂ, ದಾಖಲುಗಳೂ ಸಿಗ್ತಾ ಇವೆ...ಆಮೇಲೆ" ಸಾಗರ್ ತಮ್ಮ ಮಾತನ್ನು ಅರ್ಧಕ್ಕೆ ನಿಲ್ಲಿಸಿದರು.

ದಯಾಕರನ ತಲೆಯಲ್ಲಿ ಭಯ, ಅಚ್ಚರಿಗಳ ಬಿರುಸಾಟ, ಏನು ? ನನ್ನ ಮೇಲಿನ ಸಂಶಯ ದೃಢಪಡಿಸುವ ಸಾಕ್ಷಿಗಳೂ...ದಾಖಲೆಗಳೂ... ಅದ್ದೂ ಇಷ್ಟು ಬೇಗ ಸಿಕ್ಕಿವೆಯಾ ? ಓಹ್...ಹೇಗೆ ಸಾಧ್ಯ ಇದು" ? ಮಾತಾಡಲು ಬಯಸದ ಅವನ ಬುದ್ಧಿ ಕ್ಷಣದಲ್ಲಿ ನೂರಾರು ಕಡೆ ಹೊರಳಾಡಿ ಆಲೋಚಿಸ ತೊಡಗಿತು.

ತೋರು ಬೆರಳಿನಿಂದ ಕೆನ್ನೆ ಬಡಿದು, ತಲೆ ಎತ್ತಿ, ಕಣ್ಣು ತಿರುಗಿಸಿ ಆಲೋಚನೆ ಮಾಡಿದಂತೆ ನಟಿಸಿದ ಪಿ. ಐ. ಶೇಖರ್ ಗಂಭೀರವಾಗಿ ಕೈ ಆಡಿಸಿ ನುಡಿದರು, "ಹ್ಞಾ, ಒಂದು ಕೆಲ್ಸ ಮಾಡ್ಬೋದು ನೋಡಿ, ಈಗ ಈ ಕೇಸ್‌ಗೆ ಮುಖ್ಯ ಆಧಾರ ಮೆಡಿಕಲ್ ರಿಪೋರ್ಟ್ ನಮ್ಮ ಡಾಕ್ಟರಿಗೆ ಕೊಂಚ ಹಣದ ಮೋಹ. ನನ್ಮಗನ ಕೈ ನೋಟು ನೋಡಿದ್ರೆ ಒಂದು ವರದಿ, ಇಲ್ಲದಿದ್ರೆ ಇನ್ನೊಂದು ಕೊಡುತ್ತೆ, ಪ್ರಯತ್ನಪಟ್ಟು ನೋಡ್ಬಹುದು ನಿಮಗಾಗಿ....

"ಕೊಟ್ಟುಬಿಡಬಹುದಿತ್ತೇನೋ ? ಯಾಕೆ ಈ ಎಲ್ಲ ರಾಮಾಯಣ"? ಬಿಡುಗಡೆ ಆಶಿಸಿದ ಸುಮಾಳ ಮನಸ್ಸು. ಕೋಣೆಯ ಹೊರಗೇ ನಿಂತು, ಆಲಿಸುತ್ತಾ, ಯೋಚನೆಯೊಡನೆ ಪಿಸುಗುಟ್ಟಿತು.

"ಊಹ್ಞೂ ಯಾಕೆ ಕೊಡ್ಬೇಕು ? ತಾವೇನು ಕೊಲೆಗಾರರೇ" ? ದಯಾಕರನ ಒಂದು ಬುದ್ಧಿ ಬುಸುಗುಟ್ಟಿತು.

"ಆ ಹುಡುಗ ಯಾರದೋ ಕೊಲೆಯ ಕೈವಾಡಕ್ಕೆ ಮೊದಲೇ ತುತ್ತಾದವನಾಗಿದ್ದರೆ...? ಇದು ಕೊಲೆಯೆನ್ನುವುದೇ ಖಂಡಿತವಾಗಿಬಿಡ್ಬರೆ—ಉಫ್ ಒಂದೋ ಎರಡೋ ಸಾವಿರ ಕೊಟ್ಟು, ಅಬ್ಬ...ಕೇಸ್ ಖುಲಾಸ್ ಆಗಿ... ಓಹ್ ಇವತ್ತೇ ರಾತ್ರಿ ಊಟಿ—ಆಮೇಲೆ ಮದ್ರಾಸ್...ಆಮೇಲೆ ದೆಹಲಿ ಕಾಶ್ಮೀರ್...ಸುಮಾ ತಾನು ಇಬ್ಬರೇ....ಈ ಎಲ್ಲ ರಗಳೆಗಳಿಂದ, ದಿನದ ರೊಟೈನ್‌ನಿಂದ ದೂರವಾಗಿ, ತಂಪಾದ ಜಾಗದಲ್ಲಿ ಹಾಯಾಗಿ ಇರಬಹು

ದಾದ ತಾಣದಲ್ಲಿ ತಾವಿಬ್ಬರೇ ..." ದಯಾಕರನ ಇನ್ನೊಂದು ಬುದ್ಧಿ ಬಿಡುಗಡೆಯ ಆಲೋಚನೆಯಲ್ಲಿ ಸುಖವಾಗಿ ತೇಲಿ, ಅವನನ್ನು ಕಾಶ್ಮೀರ, ಡಾರ್ಜಿಲಿಂಗಗಳವರೆಗೆ ತೇಲಾಡಿಸಿ ಸುಖ ಕೊಟ್ಟಿತು.

"ಏನ್ಸಾರ್ ಯೋಚ್ನೆ ಮಾಡ್ತೀರಾ" ? ದಯಾಕರನ ಮೌನದ ಮಧ್ಯೆ ಎದ್ದ ತನ್ನ ಆಸೆಯ ನಗುವಿನಲ್ಲಿ ಪ್ರಶ್ನೆಯನ್ನೆತ್ತಿ ಆರಂಭಿಸಿದರು ಇನ್ಸ್‌ಪೆಕ್ಟರ್ ಶೇಖರ್, "ಯಾವ್ದಕ್ಕೂ ಚಿಂತೆ ಮಾಡ್ದೆ ಹಾಯಾಗಿ ನಿಮ್ಮ ವೈಫ್ ಜೊತೆ ಇವತ್ತೇ ಹೊರಟು ಜಗತ್ತೆಲ್ಲಾ ಸುತ್ತಾಡಿ ಬನ್ನಿ ದಯಾಕರ್, ನಾನೆಲ್ಲ ಮುಂದಿನ ವ್ಯವಸ್ಥೆ ಮಾಡ್ತೀನಿ. ವರದಿ ಕೊಡೋ ವೈದ್ಯ ನನ್ನ ಅಂಗೈ ಮೇಲೆ ಓಡಾಡುವ ಗಾಜಿನ ಗೋಲಿ ತಿಳೀತಾ ? ನಿಮ್ಮ ವಿರುದ್ಧ ವಾದಿಸುವ ಪಿ.ಪಿ.ಗೆ ನಮ್ಮ ದಾಖಲೆಗಳೇ ಆಧಾರ. ನಮ್ಮ ಕಡೆಯೇ ಅವರ ವಾದದ ತಿರುಳು" ಎಂದು ಹೆಮ್ಮೆಯ ದಾಟಿಯಲ್ಲಿ ಹೇಳಿ, ಆಸೆಯ ಪಥದಲ್ಲಿ ಮಾತನ್ನು ತಂದಿಟ್ಟು ನಿಲ್ಲಿಸಿದರು,

"ಸಹಾಯ ಮಾಡಿದ ಸತ್ಯವನ್ನು ಮುಚ್ಚಿಟ್ಟು ಲಂಚ ಕೊಡುವುದೇ ? ಇದು ಸತ್ಯವನ್ನು ಸಾಯಿಸಿ ಸುಳ್ಳಿಗೆ ಪುರಾವೆ ಒದಗಿಸುವ ಕಾರ್ಯ, ಊಹೂ ನಿಜದ ವಾಸನೆ ಒಂದಲ್ಲ ಒಂದು ದಿನ ಹೊರ ಬರುತ್ತೆ, ಅದುವರೆಗೆ ಅದೇನು ಆಗುತ್ತೋ ಆಗ್ಲಿ" ದಯಾಕರನ ನ್ಯಾಯ ಪಕ್ಷ ನಿರ್ಧರಿಸಿತು.

"ಹದಿನೆಂಟೋ ಇಪ್ಪತ್ತೋ ಎಸ್ದು ಬಿಡಿ ಸಾರ್, ನಿಮ್ಮನ್ನ ಕೊಲೆಗಾರ ಅಂದ ಬಾಯ್ಗಳು ಹಣನೇ ಕಂಡಿಲ್ಲ ಅಂತ ಹೊರಳಿಬಿಡ್ತವೆ," ಎಂದು ಸೂಚಿಸಿದವರು ಸಾಗರ್ ಅವರೇ ಇರಬೇಕು.

ಯೋಚಿಸುತ್ತಿದ್ದ ದಯಾಕರ ಹುಬ್ಬೇರಿಸಿದ. ತನ್ನ ಸೆರಗೆಳುದುಕೊಂಡು ಬಾಯಿಯ ಮೇಲೆ ಕೈ ಮುಚ್ಚಿದಳು ಸುಮಾ. "ಹದಿನೆಂಟೋ ಇಪ್ಪತ್ತೋ– ಸಾವಿರ...? ಹುಂ..."?

"ಹೌದು ಮಿಸ್ಟರ್. ಈಗ ರಾಘವಪ್ಪಂಗೆ, 10 ಸಾವಿರ ಕಳಕೊಂಡಿದ್ದೆ ಕೊಡ್ಬೇಕು, ಅದರ ಜೊತೆಗೆ ಒಂದು ಸಾವಿರ ಶವ ಸಂಸ್ಕಾರಕ್ಕೆ ಕೊಡ್ಬೇಕು. ಉಳ್ದದ್ದು ಡಾಕ್ಟರ್‌ಗೆ ಪಿ. ಪಿ.ಗೆ, ಕೋರ್ಟಿನ

ಗುಮಾಸ್ತರಿಗೆ, ಇನ್ನೂ ಯಾರ್‍ಯಾರಿಗೆ ಬಾಯಿ ಮುಚ್ಚಿಸೋಕೆ ಕೊಡಬೇಕಾಗ ಬಹುದು ಅಂತ ನಿಮಗೂ ಗೊತ್ತು. ಅಂಥದರಲ್ಲಿ ನಿಮ್ಗೆ ಕೇಳ್ತಿರೋದು ಬರೀ ಇಪ್ಪತ್ ಸಾವಿರ. ಕೊಲೆ. ಕಳ್ತನ, ಮಾಡಿದ್ದು ಮುಚ್ಚೋದು ಅಷ್ಟು ಸುಲಭಾನ ಮತ್ತೆ", ಪಿ. ಐ. ಹುಬ್ಬು ಹಾರಿಸಿ ನಕ್ಕರು.

ದಯಾಕರನಿಗೆ ಅವರ ಮಾಟಿಯೇ ಅಸಹ್ಯವೆನಿಸಿತು. "ಯಾರ್ರೀ ಕೊಲೆ ಮಾಡಿದ್ದಾರೆ ? ಎಷ್ಟು ಸಲ ಹೇಳೋದು ನಿಮ್ಗೆ"? ದಯಾಕರ ರೇಗಿ ಹೇಳಿದ. "ಆ ಹೆಣದ ಜೇಬಲ್ಲಿ, ಓಹ್ ಸಾರಿ ಹೆಣ ಅಲ್ಲ, ರೋಗಿಯ ಜೇಬಲ್ಲಿ 20 ರೂ. ಚಿಲ್ರೆ ಬಿಟ್ರೆ ಬೇರೆ ಇರ್ಲಿಲ್ಲ, 10 ಸಾವ್ರ ಇತ್ತಂತೆ. ತನಿಖೆ ಮಾಡಿ ಸರಿಯಾದ ಅಪರಾಧೀನ ಕಂಡು ಹಿಡ್ಕೊಳ್ಳಿ. ನಮ್ಮನ್ಯಾಕೆ ಅಪರಾಧಿ ಗಳು ಅಂತೀರಿ ? ಕೇಳಿದ ತಕ್ಷಣ ಹಣ ಕೊಡಲು ಹೂಂ ಅಂದುಬಿಡೋಕೆ ನಾವೇನೂ ತಪ್ಪು ಮಾಡೇ ಇಲ್ಲವಲ್ಲ, ಮೋಸದ ಹಣ ಗಳಿಕೆಯೂ ಅಲ್ಲ ನಮ್ಮದು. ನಾವೇ ದುಡಿದು ಸಂಪಾದಿಸಿದರೆ ಒಂದೊಂದು ಪೈಸೆಗೂ ಒಂದೊಂದು ರಕ್ತದ ಕಣದಷ್ಟೇ ಬೆಲೆ ಅಂತ ಕಷ್ಟಪಟ್ಟವರಿಗೆಲ್ಲ ಗೊತ್ತಿರುತ್ತೆ. ಮೋಸ ಮಾಡಿ ಗಳಿಸುವವರಿಗೆ. ಲಾಟರಿ, ಜೂಜು ಇತ್ಯಾದಿಗಳಲ್ಲಿ ಸಂಪಾದಿಸೋ ಜನಗಳಿಗೆ ಮಾತ್ರ ಹಣದ ಬೆಲೆ ಏನೂಂತ ತಿಳಿದಿರೋಲ್ಲ ಅಷ್ಟೆ.

ಅತ್ತಿಂದಿತ್ತ ಓಡಾಡಿಕೊಂಡಿದ್ದ ಸುಮಾ, ಅದೇ ತಾನೇ ಬಾಗಿಲು ನೂಕಿ, ಕಾಫಿ ಹಿಡಿದು ಒಳಬಂದವಳೇ, "ಅಬ್ಬಬ್ಬ. ಇನ್ನೂ ನಮ್ಮ ಮೇಲೆ ಅನುಮಾನ ಹೋಗಿಲ್ವಾ ನಿಮ್ಗೆ ?" ಎನ್ನುತ್ತಾ ಎಲ್ಲರ ಮುಂದೆ ಕಾಫಿ ತುಂಬಿದ ಲೋಟಗಳನ್ನಿಟ್ಟಳು.

ಜೋರಾಗಿ ನಕ್ಕುಬಿಟ್ಟರು ಅಥಿತಿಗಳು. ಪಿ, ಐ. ಶೇಖರ್ ನಕ್ಕು ಹೇಳಿದರು. "ನೋಡಿ ಮೇಡಂ ಪೋಲೀಸ್ ಇಲಾಖೆಗೆ ಸೇರಿದ ಮೇಲೆ, ಹೆಂಡತಿ, ಮಕ್ಕಳ ಬಗ್ಗೇನೇ ಕೆಲವು ಸಲ ಸುಮ್ನೆ ಸುಮ್ಮನೇ ಅನುಮಾನ ಹುಟ್ಟಿಬಿಡುತ್ತೇ ಇನ್ನು ನಮಗಿಂತ ಮೊದಲು ಬೇರೆಯವರು ಅನುಮಾನ ಪಟ್ಟುಬಿಟ್ರೆ, ನಮ್ಮ ಅನುಮಾನ ನಮ್ಮಿಂದ ದೂರ ಹೋಗೋದು, ಕೋರ್ಟ ನಲ್ಲಿ ತೀರ್ಮಾನ ಅದ್ಮೇಲೇನೇ.

"ಮಗನ ಹೆಣ ನೋಡ್ದಾಗ ಹುಟ್ಟೋ ದುಃಖದಲ್ಲಿ, ಯಾವ ತಲೆ ತಾನೇ ಸುಳ್ಳು ಪೋಣಿಸುತ್ತೆ ಹೇಳಿ ? ರಾಘುವಪ್ಪ ಆಪಾದಿಸಿದ್ದು ನಿಜವಿರ ಬಹುದು, ಅವರ ಸಹಾಯಕ ತಮ್ಮ ಮಾತು ಸೇರಿಸಿದರು.

"ಕದ್ದಿಲ್ಲಾಂತ ನಾವ್ ಹೇಳೋದು ಸುಳ್ಳಾ ಮತ್ತೆ" ?

"ಇರ್ಬಹುದು, ಯಾಕಾಗಬಾರ್ದು ?"

"ನಮಗೆ ಹಣಕ್ಕೇನೂ ಕೊರತೆಯಿಲ್ಲ ಸಾರ್, ನಾವೇಕೆ ಕದೀತೀವಿ"? ಸುಮಾ ಗತ್ತಿನಿಂದ ಕೇಳಿದಳು.

"ರಾಘುವಪ್ಪನಿಗೆ ಹಣದ ಕೊರತೆ ಇದೆ ಅಂದ್ಕೊಂಡಿದೀರಾ ನೀವು ? ಅವರಿಗೂ ಎಲ್ಲಾ ಅನುಕೂಲಗಳೂ ಇವೆ. ಸ್ವಂತ ಮನೆ ಇಲ್ಲದಿದ್ರೆ ಏನು ? ಬೇಕಾದ ಹಣಕ್ಕೆ ಏನೂ ಅಭಾವ ಇದ್ದಂತೆ ಕಾಣುವುದಿಲ್ಲ. ನೋಡಲೂ ಒಳ್ಳೆಯ ವ್ಯಕ್ತಿತ್ವ"

ಹಣೆ ಚಚ್ಚಿಕೊಂಡಳು ಸುಮಾ ನಿಜವನ್ನು ನಂಬಿಸಲಾಗದೇ.

"ನೋಡಿ ಇನ್ಸ್‌ಪೆಕ್ಟರ್ ಕದಿಯೋದು ನನ್ನ ಚಟವಾಗಿದ್ರೆ. ಬ್ಯಾಂಕ್ ನಲ್ಲಿ ನನ್ನ ಕೆಲಸ ಇದುವರೆಗೆ ಉಳೀತಾ ಇರ್ತಿಲ್ಲ. 10,000 ರೂ. ಬೇಕಾ ಗಿದ್ದಿದ್ರೆ ನನ್ನ ಕೈಗೆ ಸುಲಭವಾಗಿ ಸಿಗುವ ಬ್ಯಾಂಕ್ ಹಣ ಹಾರಿಸಿ ಓಡಿಬರ ಬಹುದಿತ್ತು. ಹೀಗೆ ಯಾರೋ ಗುರುತಿಲ್ಲದ ಚಿಕ್ಕ ಹುಡುಗನನ್ನು ಕೊಂದು ಕಸಿಯಬೇಕಾಗಿರ್ತಿಲ್ಲ. ಆವನ ಹತ್ತಿರ 10,000 ರೂ. ಇದೆ ಅಂತ ಗೊತ್ತಾ ಗೋದಾದ್ರೂ ಹೇಗೆ ಸಾಧ್ಯ ? ಸುಮ್ನೆ ಅರ್ಥವಿಲ್ಲದ ಆರೋಪ ಇವೆಲ್ಲ", ದಯಾಕರ ವಾದಿಸಿದ.

"ಹೂ, ಎಲ್ಲಾ ಕೊಲೆ, ಖೂನಿಗಳೂ ಮೊದಲು ಅರ್ಥವಿಲ್ಲದ್ದೇ ಅನಿಸುತ್ತೆ ದಯಾಕರ್. ಒಬ್ಬರಿಗೊಬ್ಬರು ಗೊತ್ತಿರೋದು. ಗೊತ್ತಾ ಗೋದು ಹೇಗೆ ಸಾಧ್ಯ ಅಂತಲೂ ಅನಿಸುತ್ತೆ. ಪೂರ್ತಿ ಪ್ರಕರಣದಲ್ಲಿ ಮುಳುಗಿ ನೋಡಿದಾಗಲೇ ಗೊತ್ತಾಗೋದು ಯಾಕೆ ? ಹೇಗೆ ? ಯಾವುದ ಕ್ಕಾಗಿ ಮಾಡಿದ್ದು ಅಂತ. ಈಗ ನೀವು ಹೇಳಿದ ಮಾತೇ ತೊಗೊಳ್ಳಿ,

ಬ್ಯಾಂಕ್‌ನಲ್ಲಿ ಹಣವಿರುತ್ತೆ ನಿಜ. ಆದ್ರೆ ಕ್ಯಾಷ್ ಕೌಂಟರ್‌ನಿಂದ ಹಾರಿಸಿದ್ರೆ ತಕ್ಷಣವೇ ಸಿಕ್ಕಿಹಾಕಿಕೋಬಹುದು. ಕೆಲ್ಸವೂ ಹೋಗಬಹುದು, ಹೊರಗಡೆ ಮಾಡಿದ ಕಳ್ಳತನ ಯಾರಿಗೂ ಗೊತ್ತಾಗಲ್ಲ ಬೇಗ ಅನ್ನೋದು ಒಂದು ಅಂಶ. ಇನ್ನೊಂದು ಯಾರ ಕೈಗೂ ಸಿಗ್ದೇ. ಕೆಲ್ಸವೂ ಕಳದುಕೊಳ್ಳದೇ ಆಗಾಗ ಸಂಪಾದಿಸಬಹುದು. ನಿನ್ನೆ ರಾಘವಪ್ಪ ನಿಮ್ಮನ್ನ ಅಪರಾಧಿ ಅಂದುಕೊಳ್ಳದೇ ಹೋಗಿದ್ರೆ, ನೀವು ಮಾಡಿದ್ದು ಸಹಾಯವೇ ಅಂದುಕೊಂಡು ಬಹುಮಾನವೂ ನೀಡಿದ್ರೆ, ರೂ 10.000 : ಕದ್ದದ್ದರ ಜೊತೆಗೆ ಬಹುಮಾನದ ಮೇಲ್ಸಂಪಾದನೆಯೂ ಗಿಟ್ಟಿರುತ್ತಿತ್ತಲ್ವಾ ? ಆದ್ರೆ ದುರದೃಷ್ಟವಶಾತ್..." ಎಂದು ಸಹಾಯಕ ಇನ್ಸ್‌ಪೆಕ್ಟರ್ ಸಾಗರ್ ತಮ್ಮ ಮಾತು ಹೊರ ಹಾಕಿದ್ದು, ದಯಾಕರನನ್ನು ರೇಗಿಸಿ. ನಿಜ ಹೊರತರಲೋ ಅಥವಾ ನಿಜವಾಗಲೂ ಅನುಮಾನ ವಿತ್ತೋ ದಯಾಕರನಿಗೆ ತಿಳಿಯಲಿಲ್ಲ.

"ಅದಕ್ಕೇ ನಾನು ಹೇಳಿದ್ದು, ನಮ್ಮ ಸಲಹೆಯಂತೆ...ಹೆ ಹೆ ಹೆ... ಹೇಗೂ ನಿಮಗೇನೂ ತೊಂದರೆಯಾಗೋಲ್ಲ, ಎಲ್ಲೋ ಸ್ವಲ್ಪ ಕೈ ಚೆಲ್ಲಿದ್ರೆ–ಅಲ್ವೇ" ಪೋಲೀಸ್ ಆಫೀಸರ್ ಶೇಖರ್ ಮಧ್ಯೆ ಬಾಯಿ ಹಾಕಿದರು. ದಯಾಕರನ ಮುಖ ನೋಡದೇ ಕೋಣೆಯ ಬಾಗಿಲಿಗೆ ಹಾಕಿದ ಚಿನ್ನದ ಹೊಳಪಿನ ಕರ್ಟನ್ ನೋಡುತ್ತ.

"ಷಟ್ ಆಪ್, ಡೋಂಟ್ ಟಾಕ್ ನಾನ್‌ಸೆನ್ಸ್, ನಿಜಾನ ನಿಜ ಅನಿಸೋದಿಕ್ಕೆ ಪ್ರಯತ್ನಪಡ್ತೀನಿ ಇನ್ಸ್‌ಪೆಕ್ಟರೇ, ದುಡ್ಡು ಮಾತ್ರ ಕೊಡೋಲ್ಲ ಯಾರ್‍ಗೂ" ಕಿರುಚಿದ ದಯಾಕರ.

"ಹ ಹ ಹ–" ಇನ್ಸ್‌ಪೆಕ್ಟರ್ ಶೇಖರ್ ಮತ್ತವರ ಜೊತೆಯವರಿಗೆ ಅದೇನೋ ನಗು, "ಈ ನಿಜಕ್ಕೆ ಪುರಾವೆ ಇಲ್ಲ. ಸಾಕ್ಷಿ ಇಲ್ಲ, ಕೆಲವು ನಿಜಗಳಿಗೆ ನೀವು ಏನು ಹೆಣಗಾಡಿದ್ರೂ ಪುರಾವೆ ಸಿಗ್ಲೋಲ್ಲ ದಯಾಕರ್. ಇದು ಹೇಗೆ ನಿಜ ಅನಿಸಿಕೊಳ್ಳುತ್ತೆ, ಹೇಳಿ, ತಿಳ್ಕೊಳಿ ಸ್ವಲ್ಪ. ಸತ್ಯಕ್ಕೆ ಇರೋದು ಒಂದೇ ನಾಲಿಗೆ, ಒಂದೇ ಕಿವಿ. ಇದು ನಿಜವೇ ಆಗಿದ್ರೆ ಅಂತ ನಾನು ಹೇಳ್ತಿದೀನಿ ಅಷ್ಟೆ. ಸುಳ್ಳಿಗೆ, ಊರು ತುಂಬಾ ನಾಲಿಗೆಗಳೂ, ಕಿವಿಗಳೂ, ಹತ್ತಾರು ವರ್ಷಗಳ ಮೇಲೆ ಸತ್ಯ ಹೊರಬಂದ್ರೆ, ಆ ಹೊತ್ತಿಗಾಗ್ಲೇ ನೀವು,

ಕಳ್ಳ ಕೊಲೆಗಾರ ಎಂದು ಸಾರಿದ ನೂರಾರು ಸುಳ್ಳುಗಳೆಲ್ಲ ಸತ್ಯಗಳಾಗಿ ಧೃಡ ವಾಗಿ, ಎಲ್ಲರ ಮನಸ್ಸಿನಲ್ಲಿ ನೀರಾಗಿ ಕರಗಿ ಹೋಗಿರುತ್ತೆ. ನಿಮ್ಮ ಸತ್ಯಾನ ನಿಮ್ಮ ನಾಲಿಗೆ ಅಷ್ಟೇ ವರ್ಣಿಸಿಕೋ ಬೇಕು. ಆಸಕ್ತಿ ಇರೋ ಇನ್ನೊಂದೆ ರಡು ಸಂಬಂಧಿತ ಕಿವಿಗಳು ಕೇಳ್ಬೇಕು ಅಷ್ಟೆ. ಬೇರೆ ಯಾರಿಗೂ ಈ ಹೊತ್ತು ಹಳೆಯದಾದ ವಿಷಯ ಬೇಕಿರೋಲ್ಲ. ಅದಕ್ಕೆ ನಾ ಹೇಳಿದ್ದು." ಶೇಖರ್ ತಮಗೆ ತಿಳಿದ ತತ್ವಗಳನ್ನು ದಯಾಕರನ ಮುಂದೆ ಸುರಿದರು.

"ಸತ್ಯ ತುಂಬಾ ಸೋಮಾರಿ ದಯಾಕರ್, ದುಬಾರಿನೂ ಕೂಡ, ಹೊರಗೆ ಬರೋಕೆ ವರ್ಷಗಳೇ ತೊಗೊಳಬಹುದು. ಸಾವಿರಾರು ರೂಪಾಯಿ ಖರ್ಚು ಮಾಡಿಸುತ್ತೆ. ಹೇಗಿದ್ರೂ ಖರ್ಚಾಗುತ್ತೆ, ಅಲ್ವಾ? ಕೊಲೆ ಮಾಡಿದ್ದು ನಿಜ ಆಗ್ಲೀ ಸುಳ್ಳಾಗ್ಲೀ ವರ್ಷಗಟ್ಲೆ ಕೋರ್ಟಿಗೆ ಓಡಾಡಿ, ಖರ್ಚನ್ನೂ ಮಾಡೋ ಬದ್ಲು. ಈಗ್ಲೆ ಇಪ್ಪತ್ ಸಾವಿರ ಕೊಟ್ಟು, ಕೈ ತೊಳೆ ಯೋದು ಜಾಣ್ಮನ ದಯಾಕರ್. ರಾಘವಪ್ಪಂಗೂ ಸಮಾಧಾನ. ನಿನಗೂ ನೆಮ್ಮದಿ. ಗೊತ್ತಿರೋ ನಾವೊಂದು ನಾಲ್ಕು ಜನಕ್ಕೆ ಬಿಟ್ರೆ ಬೇರೆಯವರಿಗೆ ರಾಘವಪ್ಪನ ಮಗ ಕೊಲೆಯಾದ ಅನ್ನೋದೂ ತಿಳಿಯೋಲ್ಲ" ತಮ್ಮ ಪಿ.ಒ. ಮಾತಿಗೆ ಒಗ್ಗರಣೆ ಹಾಕುವಂತೆ ಸಾಗರರ ಉಪದೇಶ.

ಸತ್ಯ, ಮಿಥ್ಯಗಳ ಬಗ್ಗೆ ತತ್ವಗಳ ಮಳೆ ಸುರಿದ ಅದೇ ನಾಲಿಗೆಗಳಲ್ಲಿ, ಮತ್ತೂ ದಯಾಕರನೇ ಕೊಲೆಗಾರ ಎನ್ನುವ ಎಳೆ ಹಿಡಿದ ಮಾತು, ಹಣ ಎಳೆಯುವ ಸಂಚು. ಇದರಲ್ಲಿ ರಾಘವಪ್ಪನೂ ಶಾಮೀಲೋ ಏನೋ, ದಯಾಕರನ ಧಮನಿಗಳಲ್ಲಿ ಸಿಟ್ಟು ಸೆಟೆದು ನಿಲ್ಲತೊಡಗಿತ್ತು.

"ರೀ ಇನ್‌ಸ್ಪೆಕ್ಟರೇ, ರೀ ಅಸಿಸ್ಟೆಂಟ್‌ರವರೇ ಏನ್ರೀ ನೀವು ಮಾತಾ ಡೋದು. ನಾವು ಕಳ್ಳರೂ ಅಲ್ಲ, ಕೊಲೆಪಾತಕಿಗಳೂ ಅಲ್ಲ, ಆ ರಿಪೋರ್ಟ್ ಅದೇನ್ ಬರುತ್ತೋ ಬರ್ಲಿ. ನಾವೂ ನೋಡ್ತೀವಿ, ನಿಜವನ್ನು ಬದುಕೋ ಹಾಗೆ ಮಾಡ್ತೀವಿ" ಎಂದು ಸಿಟ್ಟಿನಲ್ಲೇ ಹೇಳಿದ.

ಮತ್ತೆ ಅದೇ ನಗು. ಪೋಲೀಸ್ ಇಲಾಖೆಯ ನೌಕರರಿಗೆ, ಹಣದ ದಾಹಕ್ಕೆ ಹಸಿಯೂ ಸೊಪ್ಪಡಿಸದ ದಯಾಕರನೊಡನೆ ಮಾತು ಮುಂದುವರಿಸ

ಲಾಗದೆಯೋ ಅಥವಾ ಮುಂದಿನ ಪ್ರಶ್ನೆ ಹೊಳೆಯುದೆಯೋ ಕ್ಷಣ ಮೌನ ವಹಿಸಿದರು.

"ಕಾರನ್ನು ವಾಪಸ್ ಮಹಿಮಾಪುರಕ್ಕೆ ಕಳಿಸಬಹುದೇ ನಾಸಿವತ್ತು? ಅಥ್ವಾ ಅದಕ್ಕೂ ನಿಮ್ಮದೇನಾದ್ರೂ ಅಬ್ಜೆಕ್ಷನ್ ಇದೆಯೇ? ಇನ್ನೂ ತನಿಖೆ ಗಿನಿಖೆ ಮಾಡೋದಿದೆಯಾ?" ದಯಾಕರನೇ ಕೇಳಿದ ಒಂದೆರಡು ನಿಮಿಷಗಳ ನಂತರ.

"ಹ್ಞಾ, ಈಗ ನಮ್ಮ ತಂಡ ಇನ್ನೊಮ್ಮೆ ತನಿಖೆ ಮುಗಿಸಿದ ಮೇಲೆ ವಾಪಸ್ ಕಳಿಸಬಹುದು. ಅಂದ ಹಾಗೆ ನಿಮಗೆ ಕೇಳುತ್ತಿದ್ದ ಪ್ರಶ್ನೆ ಅರ್ಧಕ್ಕೆ ನಿಲ್ಲಿಸಿಬಿಟ್ಟೆ. ನಿಮ್ಮ ಬಾಯಿಂದ ಇನ್ನೇನಾದ್ರೂ ವಿಷಯ ಸಿಕ್ಕುತ್ತೇನೋ ಅಂತ ಹಣದ ಆಸೆ ಇರುವಂತೆ ಪ್ರಶ್ನೆ ಹಾಕಿ ಪರೀಕ್ಷಿಸಿದೆ ಅಷ್ಟೆ. ಓ್ಞ, ಹೌದು ನಿಮ್ಮ ಜೊತೆಗೆ ಇದ್ದವರು ಯಾರು? ಕಾರಿನಲ್ಲಿ ನೀವು ಮೃತನನ್ನು ಹಾಕುವಾಗ?

"ಮೃತ ಅಲ್ಲ ರೋಗಿ" ಒತ್ತಿ ಹೇಳಿದ ದಯಾಕರ, ತನ್ನ ಉತ್ತರ ಮುಂದುವರಿಸಿದ. ಹೆಸರು ಹೇಳಲಿಲ್ಲ ಅವರು, ನಾವೂ ಕೇಳಲಿಲ್ಲ, ಇದ್ದದ್ದೇ ಹತ್ತು ನಿಮಿಷ. ಜೊತೆಗೆ ನನಗೆ ಅವರ ವಿಷಯ ಬೇಕು ಎಂದೂ ಅನಿಸ ಲಿಲ್ಲ. ಬಹುಶಃ ಯಾವ ಆಕರ್ಷಣೆಯೂ ಉಳಿದಿಲ್ಲದ ಮುದುಕ ಎಂದಿರ ಬೇಕು. ಅವರು ಹೀಗೇ ಈ ತರಹದ ಅಪಘಾತಗಳ ವಿಷಯದ ಬಗ್ಗೆ ಒಂದೆರಡು ಮಾತು ಹೇಳಿದ್ರು ಅಷ್ಟೆ ದಾರಿಯಲ್ಲಿ. ಅವರ ಮಾತಿನ ಧಾಟಿಯೂ ನಮ್ಮ ಕಿವಿಗಳನ್ನು ಆಕರ್ಷಿಸಲಿಲ್ಲವೆಂದೋ ಏನೋ ನಾವು ಅವರ ಬಗ್ಗೆ ಏನನ್ನೂ ಕೇಳುವ ಆಸಕ್ತಿ ತೋರಲಿಲ್ಲ.

"ಮಾತಿನ ಮಧ್ಯೆ ಒಮ್ಮೆ ಅವರು ಮಹಾತ್ಮ ನಗರವೋ, ಬಜಾರೋ, ಅಲ್ಲಿರುವ ರತ್ನಾ ಟೈರ್ ಕಂಪೆನಿಯಲ್ಲಿ ಕೆಲಸ ಎಂದ ಹಾಗಿತ್ತು" ಸುಮಾ ಅವರ ಪ್ರಶ್ನೆಗೆ ಮೊದಲು ತಾನಾಗಿಯೇ ನಡುವೆ ಹೇಳಿದವಳು, ಆಮೇಲೆ ಅವರೂ ಇದು ಕೊಲೆಯೇ ಎಂದು ವಾದಿಸಿಬಿಟ್ಟರೆ? ಯಾರಿಗೆ ಗೊತ್ತು, ಯಾರು ಸುಳ್ಳು ಹೇಳುತ್ತಾರೋ ಯಾರು ನಿಜ ಹೇಳುತ್ತಾರೋ ತಮ್ಮೊಡನೆ ಯಂತೂ ಅವರು ಹೇಳಿದ್ದು, ಆ ಹುಡುಗ ಫಿಟ್ಸ್ ಬಂದು ಬಿದ್ದಿದ್ದ ಎಂದೇ.

ಆದರೆ ಈಗ ಆ ಮಾತೇ ಬದಲಿಸಿಬಿಟ್ಟರೆ? ಬೇಡ ಗೊತ್ತಿಲ್ಲ ಎನ್ನುವುದೇ ಒಳ್ಳೆಯದು" ಎನ್ನಿಸಿ, ಹಾಗೇ ಹೇಳಿದಳು ಪಿ. ಐ. ರವರು ಕೇಳಿದಾಗ.

"ಹ್ಞಾ, ಹ್ಞಾ, ದಯಾಕರ್ ನೀವು ಸುಮನಾರನ್ನ ನಿಮ್ಮ ಜೊತೆಗೆ ಕರೆದುಕೊಂಡು ಹೊರಡುವ ಮುನ್ನ ಆ ದಿನ ಎಲ್ಲೆಲ್ಲಿ ಹೋಗಿ ಬಂದಿರಿ"?

"ಸಂಜೆ 5 ಘಂಟೆಗೆ ನನ್ನ ಫ್ರೆಂಡ್ ಒಬ್ಬನನ್ನು ಊರಿಗೆ ಹೋಗುವ ಮೊದಲು ಮೀಟ್ ಮಾಡೋಣ ಎಂದುಕೊಂಡು. ಅವನ ಮನೆಗೆ ಹೋಗಿದ್ದೆ. ಆದ್ರೆ ಅವನು ಮನೆಯಲ್ಲಿ ಇರಲಿಲ್ಲ. ಅಲ್ಲಿ ವೈಟ್ ಮಾಡೋ ಬದಲು ಲೈಬ್ರೆರಿಗೆ ಹೋಗೋಣ ಅಂದುಕೊಂಡು ½ ಘಂಟೆ ಅಲ್ಲೇ ಹತ್ತಿರ ವಿರುವ ಒಂದು ಲೈಬ್ರರಿಯಲ್ಲಿ ಕೂತಿದ್ದೆ. ನನ್ನ ಫ್ರೆಂಡ್ ಮನೆ ಅಲ್ಲೇ ಇದೆ ಆ ಕಡೆ, ½ ಘಂಟೆ ತಿರುಗಿ ಬಂದು ನೋಡಿದಾಗಲೂ ಫ್ರೆಂಡ್ ಮನೆಗೆ ಬೀಗವಿತ್ತು. ಆದ್ರಿಂದ ಮನೆಗೇ ವಾಪಸ್ ಬಂದೆ".

"ಬಂದಾಗ ಎಷ್ಟು ಗಂಟೆ"?

"ಆರು ಘಂಟೆ ಆಗಿರ್ಬೇಕು ? ಬರುತ್ತಿದ್ದ ಹಾಗೇ ಡ್ರೈಕ್ಲೀನ್‌ಗೆ ಕೊಟ್ಟ ಬಟ್ಟೆ ಮತ್ತು ಫೋಟೋ ಫಿಲಂ ತಂದಿಲ್ಲ, ಅದನ್ನ ತರ್ಬೇಕು ಈಗ್ಲೇ ಎಂದು ಸುಮನಾ ನೆನಪಿಸಿದಳು. ಕಾಫೀ ಒಂದು ಡೋಸ್ ಕುಡಿದು ತಿರುಗಿ ಹೊರಟೆ, 14ನೇ ಬ್ಲಾಕ್ ಕಡೆಗೆ, ಬಟ್ಟೆಗಳನ್ನು ಹಿಂದಿರುಗಿ ಪಡೆದು, ಫಿಲಂ ಖರೀದಿಸಿ ಮನೆಗೆ ಬಂದೆ".

"14ನೇ ಬ್ಲಾಕ್‌ನಲ್ಲಿ ಎಲ್ಲೆಲ್ಲಿ ಹೋಗಿ ಬಂದಿರಿ, ಮನೆಗೆ ಬಂದಾಗ ಎಷ್ಟು ಘಂಟೆ"? "ಡ್ರೈಕ್ಲೀನರ್ಸ್ ಶಾಪ್‌ಗೆ ಹೋಗಿ ಫಿಲಂ ತರಲು 13ನೇ ಬ್ಲಾಕ್‌ನಲ್ಲಿರುವ ಯಾವುದೋ ಅಂಗಡಿಗೆ ಹೋಗಿದ್ದೆ ಅಷ್ಟೆ—" ಎಂದವ, "ಹ್ಞಾ. ಮರೆತೆ, ವಿಶ್ವಾಸ್‌ನಲ್ಲಿ ಮತ್ತೆ ಕುಡಿದೆ ಎಂದು".

"ಇನ್ನೊಮ್ಮೆ ಅಂದರೆ. ಮೊದಲೊಮ್ಮೆ ಹೋಗಿದ್ರಾ ಅಲ್ಲಿಗೆ"?

"ಇಲ್ಲಾ, ಮೊದಲು ಆಗತಾನೇ ಮನೆಯಿಂದ ಕಾಫಿ ಕುಡಿದು ಹೊರ ಟವ, ವಿಶ್ವಾಸ್‌ನಲ್ಲಿ ಮತ್ತೆ ಕುಡಿದೆ ಎಂದು".

"ಮನೆಗೆ ಬಂದಾಗ ಎಷ್ಟು ಘಂಟೆ".

"**6.45** ಬಂದ ಕೂಡಲೇ ತಂದ ಬಟ್ಟೆಗಳಲ್ಲಿ ಬೇಕಾದುದನ್ನು ನಮ್ಮ ಪ್ಯಾಕಿಂಗ್ಸ್‌ಗಳಲ್ಲಿ ಸೇರಿಸಿ, ಮಹಿಮಾಪುರಕ್ಕೆ ಹೊರಟೆವು, ಮನೆ ಬಿಟ್ಟಾಗ **7–15** ಅಥವಾ **7-25** ಆಗಿರಬೇಕು". ಪುನಃ ದಯಾಕರ ಆ ದಿನ ಮಾಡಿದ ಕೆಲಸಗಳ ಬಗ್ಗೆ ಹೋಗಿ ಬಂದ ಜಾಗಗಳ ಬಗ್ಗೆ, ವಿವರ ಕೇಳಿ, ನೋಟ್ ಮಾಡಿಕೊಂಡ ವಕೀಲರು, ಸುಮಾಳತ್ತ ತಿರುಗಿ ಕೇಳಿದರು.

"ನಿಮ್ಮ ಜೊತೆಗೆ ಬಂದ ಮುದುಕರು ರತ್ನಾ ಟೈರ್ ಕಂಪೆನಿ ಎಂದರೇ? ಎಲ್ಲಿದೆ ಅದು?"

"ಹೌದು, ಎಲ್ಲಿದೆ ಅಂತ ಗೊತ್ತಿಲ್ಲ"

"ಆಗಲೇ ಏನೋ ಹೇಳಿದ್ದೀರಲ್ವಾ?"

"ಇಲ್ಲ, ರತ್ನಾ ಟೈರ್ ಎಂದಷ್ಟೇ ಹೇಳಿದ್ದು"

"ಅವರು ತಮ್ಮ ಹೆಸರು ಹೇಳಲಿಲ್ವಾ?"

"ಉಹ್ಞು ನಾವ್ ಕೇಳಲಿಲ್ಲ"

"ಸುಮಾಗೆ ಏನು ಪ್ರಶ್ನೆ ಬೇಕಾದ್ರೂ ಕೇಳಿ ಸಾರ್. ಅವಳೂ, ನಾನೂ ಒಟ್ಟಿಗೇ ಹೊರಟಿದ್ದು. ಅವಳು ಕೇಳಿಸಿಕೊಂಡಷ್ಟೂ ನಾನು ಕೇಳಿಸಿ ಕೊಂಡೇ ಇಲ್ಲ. ನಂಗೆ ಈಗ ಅರ್ಜೆಂಟ್ ಕೆಲ್ಸ ಇದೆ, ಸ್ವಲ್ಪ ಬೇಗ ಹೋಗಿ ಬರ್ತೀನಿ" ದಿಢೀರನೆ ಬುದ್ಧಿಗೆ ಹೊಳೆದ, ಲಾಯರೊಬ್ಬರನ್ನು ಹಿಡಿಯಬೇಕು ಎನ್ನುವ ಯೋಚನೆಯನ್ನು ಕಾರ್ಯರೂಪಗೊಳಿಸಲು, ಆಗಲೇ ಹೊರ ಹೋಗುವ ಆತುರ ತೋರಿದ ದಯಾಕರ ತನ್ನೆಲ್ಲಾ ತಾಳ್ಮೆ ಕಳೆದುಕೊಂಡವ ನಂತೆ.

ಪಿ. ಐ. ರವರಾದ ಶೇಖರ್‌ರವರ ಅನುಮಾನ ಪೂರ್ತಿ ಬಲಗೊಂಡಿತು "ನೋ, ನೋ ದಯಾಕರ್" ಯು ಕೆನಾಟ್ ಗೋ ಎನಿವೇರ್, ಯು ಆರ್ ಅರೆಸ್ಟೆಡ್" ಅವರು ಗಂಭೀರವಾಗಿ ಆಜ್ಞಾಪಿಸಿದರು.

"ಅರೆಸ್ಟ್? ಯಾವ ಆಧಾರದ ಮೇಲೆ?"

"ಅನುಮಾನಾಸ್ಪದವಾದ ನಿಮ್ಮ ವರ್ತನೆಯ ಆಧಾರದ ಮೇಲೆ. ರಾತ್ರಿ ಸುರೇಶ್ ಬಿದ್ದಿದ್ದ ಸ್ಥಳ ತೋರಿಸಲು ಹಿಂಜರಿದಿದ್ದು, ಕರೆಕ್ಟ್ ಸ್ಪಾಟ್ ತೋರಿಸಬೇಕೇ ಬೇಡವೇ ಎಂಬುದಕ್ಕೆ ಸನ್ನೆಯ ಮಾತಿನ ಮೂಲಕ ನಿಮ್ಮ

ಹೆಂಡತಿಯ ಸಲಹೆ ಕೇಳಿದ್ದು, ಒಮ್ಮೆ ನಿಮ್ಮ ಜೊತೆ ಬಂದವರ ವಿಷಯ ಏನೂ ಗೊತ್ತಿಲ್ಲ ಎಂದದ್ದು, ಈಗ ಹೆಸರು, ವಿಳಾಸ ಹೇಳದೇ ಮರೆಮಾಚು ತ್ತಿರುವುದು, ರಾತ್ರಿ ಈ ಮನೆ ತೋರಿಸಲು, ನಿಮ್ಮ ವಿಳಾಸ ಹೇಳಲೂ ಹಿಂದು ಮುಂದು ನೋಡಿದ್ದು, ಹೆಂಡತಿಯನ್ನು ನಮ್ಮ ಮುಂದಿಟ್ಟು ತಪ್ಪಿಸಿ ಕೊಳ್ಳಲು ಹವಣಿಸುತ್ತಿರುವ ನಿಮ್ಮ ಈ ಚಾತುರ್ಯ, ಮೊದಲೇ ಹನಿ ಮೂನ್‌ನ ನೆವ ಹೇಳುತ್ತಿರುವ ನೀವು ನಿಮ್ಮ ಪತ್ನಿಯೊಡನೆ, ಯಾವ ಕ್ಷಣ ವಾದರೂ ಬಾಂಬೆಗೋ,ಕಾಶ್ಮೀರಿಗೋ ಹಾರಿ,ಕಣ್ಮರೆಯಾಗಿಬಿಡಬಹುದಲ್ಲ?"

"ನಾನು ತಪ್ಪಿಸಿಕೊಳ್ಳೋಕೆ ಹವಣಿಸ್ತಾ ಇಲ್ಲ ಇನ್ಸ್‌ಪೆಕ್ಟರೇ ಯಾವ ದಾದ್ರೂ ಲಾಯರ್ ಹತ್ರ ಬೇಗ ಮಾತಾಡಿ ಬರೋಣ ಅಂತ ಹೊರಟಿದ್ದು ಅಷ್ಟೆ"

"ಈ ತರಹದ ನೂರು ಸುಳ್ಳುಗಳನ್ನು ಹೇಳಬಹುದು ನೀವು, ವಕೀಲ ರನ್ನು ಭೇಟಿ ಮಾಡೋಕೆ ಯಾಕಿಷ್ಟು ಆತುರ. ನಾವೇನು ನಿಮ್ಮನೆಯಲ್ಲಿ ಇಡೀ ದಿನ ಪ್ರಶ್ನೆ ಕೇಳ್ಕೊಂಡು ಇರ್ತಿರಲಿಲ್ಲ ನಾವು ಹೋದ್ಮೇಲೆ ಲಾಯರ್ ಹತ್ರ ಹೋಗ್ಬಹುದಿತ್ತು" ಸಾಗರರ ಪ್ರಶ್ನೆ.

"ಹುಂ, ಸರಿ, ಆದ್ರೆ ನನ್ನ ಅರೆಸ್ಟ್ ಮಾಡೋಕೆ, ಹೀಗೆ ಇದ್ದಕ್ಕಿದ್ದಂತೆ ನಿಮ್ಗೆ ಏನಧಿಕಾರ ಇದೆ?"

"ಅಧಿಕಾರದ ಬಗ್ಗೆ ವಿವರಣೆ ಬೇಕಾ? ಪಿ.ಒ. ಶೇಖರ್ ತಮ್ಮ ಅಧಿಕಾರದ ಬಗ್ಗೆ ವಿವರಣೆ ಕೊಟ್ಟರು. ಕ್ರಿಮಿನಲ್ ಪ್ರೊಸೀಜರ್ ಕೋಡ್‌ನ ಸೆಕ್ಷನ್ 41ರಲ್ಲಿ, ನಮ್ಗೆ ಇರುವ ಹಕ್ಕಿನ ಪ್ರಕಾರ ನಿಮ್ಮನ್ನು ಅರೆಸ್ಟ್ ಮಾಡ ಬಹುದು, ಸೆಕ್ಷನ್ 109ರಲ್ಲಿ ವಿವರಿಸಿರುವ ವ್ಯಕ್ತಿಗಳಲ್ಲಿ, ಒಂದು ಗುಂಪಿಗೆ ನೀವು ಸೇರಿರುವಿರಿ ಎಂಬ ಆಧಾರದ ಮೇಲೆ, ಇನ್ನೂ ಬೇಕಾ ಡೀಟೈಲ್ಸ್? ಯಾವುದೇ ವ್ಯಕ್ತಿ **Cognisable offence** ಒಂದಕ್ಕೆ ಸಂಬಂಧಿಸಿದ್ದರೆ ಅವನು ಈ ಕೊಲೆಗೆ ಸಂಬಂಧಿತನಾಗಿದ್ದಾನೆ ಎಂದು ತೋರಲು ರೀಸನಬಲ್ ದೂರು ಬಂದಿದ್ದರೆ ಅಥವಾ ಕ್ರೆಡಿಬಲ್ ಮಾಹಿತಿಗಳೇನಾದರೂ ಸಿಕ್ಕಿದ್ದರೆ, ಅಥವಾ ಸಕಾರಣ ಅನುಮಾನಗಳು ಹುಟ್ಟಿದರೆ, ಅಂಥವನನ್ನು ಯಾವ ವಾರಂಟೂ ಇಲ್ಲದೇ, ನ್ಯಾಯಾಧಿಪತಿಗಳ ಆದೇಶವೂ ಇಲ್ಲದೇ ಬಂಧಿಸಲು ಈ ಪೋಲೀಸ್ ಆಫೀಸರ್‌ಗೆ ಅಧಿಕಾರವಿದೆ ತಿಳೀತಾ?"

ನಿಟ್ಟುಸಿರಿಟ್ಟ ದಯಾಕರ ತಲೆ ಕುಟ್ಟಿಕೊಂಡ, ಸುಮಾಳ ನಾಲಿಗೆಗೆ ಮತ್ತೊಮ್ಮೆ ಮೌನವಾಯುವಿನ ಬಡಿತ. ತಲೆಯಲ್ಲಿ ನೋವಿನ ಗದ್ದಲ, ಯಾರೋ ಲಾಯರನ್ನು ಮಾತಾಡಿಸಿ ಬರಲೆಂದು ಹೊರಗೆ ಹೋಗಿದ್ದ ದಯಾಕರನ ತಂದೆ ಆಗಷ್ಟೇ ಹಿಂದಿರುಗಿ ಬಂದು, ಪ್ರಸಃ ಮನೆಯಲ್ಲಿ ಪೋಲೀಸ್ ದಳ ಕಂಡು ಬೆರಗಾಗಿ ನಿಂತರು. ಮಗ, ಸೊಸೆ, ಐ.ಪಿ.ಗಳ ಮಾತಿನ ಚಕಮಕಿಗೆ ಬೆದರಿ, ಆಗಾಗ ಬಂದು ಇಣುಕಿ ಹೋಗುತ್ತಿದ್ದ ದಯಾಕರನ ತಾಯಿ ಮಗನನ್ನು ಅರೆಸ್ಟ್ ಮಾಡುತ್ತಿರುವುದು ನೋಡಿ ಗಾಭರಿಗೊಂಡು ಕಣ್ಣರಳಿಸಿ ನಿಂತರು.

ದಯಾಕರನ ತಂದೆ ವಸಂತರಾಮ ಒಳ್ಳೆಯ ಗುಣದವರು. ಮೊದಲು. ತಮ್ಮ ಹಳ್ಳಿಯಲ್ಲಿ ಆಸ್ತಿ—ಪಾಸ್ತಿ ನೋಡಿಕೊಂಡಿದ್ದು ಮಗನನ್ನು ಓದಿಸಿದ ಅವರು, ಈ ನಗರ ಸೇರಿದ್ದು ತಮ್ಮ ಮುದಿ ತಾಯಿ ತೀರಿಕೊಂಡ ಮೇಲೆ. ಮಗನಿಗೆ ಇಲ್ಲಿ ಕೆಲಸ ಸಿಕ್ಕು 2 ವರ್ಷಗಳಾದ ಮೇಲೆ. ಇತ್ತೀಚೆಗಷ್ಟೇ ಈ ಊರಿಗೆ ಬಂದಿದ್ದು. ಅಂದರೆ 8 ವರ್ಷಗಳ ಹಿಂದೆ. ಇಲ್ಲಿ ಬಂದ 2ನೇ ವರ್ಷವೇ ಈಗಿರುವ ಮನೆಯನ್ನು ಸ್ವಂತಕ್ಕೆ ಖರೀದಿಸಿದ್ದು ಕಾನೂನು, ಕೊಲೆ, ಸರ್ಕಾರ, ನ್ಯಾಯ ಇವುಗಳ ಗಂಧವೇ ಇಲ್ಲ ಅವರಿಗೆ. ಅವರ ಮನೆಯಲ್ಲಿ ಯಾರಿಗೆ ತಾನೇ ಗೊತ್ತಿದೆ. ಅಲ್ಪ ಸ್ವಲ್ಪ ವ್ಯವಹಾರ ಜ್ಞಾನವಾದರೂ ಇದ್ದುದು ಎಂದರೆ ದಯಾಕರನಿಗೇ. ಸ್ವಲ್ಪ ಆದ್ರೆ ಎಲ್ಲರೂ ಬುದ್ಧಿವಂತರಾಗೇ ಎಲ್ಲಿ ಹುಟ್ಟಿರ್ತಾರೆ ? ಮಿದುಳಲ್ಲಿ ಮೊಳಕೆ ಒಡೆಯೋದು, ಬುದ್ಧಿಯ ಕೊಂಬೆಗಳು ಹರಡಿಕೊಳ್ಳೋದು ಇಂಥ ಸಂದರ್ಭಗಳು ಎದುರಾದಾಗಲೇ ಇರಬೇಕು. ವಿವಿಧ ಕ್ಷೇತ್ರಗಳಲ್ಲಿ ಮುಂದೆ ಬರುವ ಇಂಥ ಹಲವು ಸಂದರ್ಭಗಳು ಎಂಥವರ ಬುದ್ಧಿಯನ್ನೂ ಹೀಚಿಸಿ ಬುದ್ಧಿವಂತರನ್ನಾಗಿ ಮಾಡಬಹುದೋ ಏನೋ.

ದಯಾಕರನ ತಂದೆ ತಲೆ ಕರೆದರು, ಕೈ ಹಿಸುಕಿದರು. ಎಂಥ ಪ್ರಮಾದ ಆಗಿಹೋಯ್ತು ಇದು. ಬೆಳಿಗ್ಗೆ 8 ಘಂಟೆಗೆ ಹೋಗಿದ್ದರೂ, ತಾವು ಭೇಟಿ ಮಾಡಲು ಹೋದ ಆ ವಕೀಲರೂ ಸಿಗಲಿಲ್ಲ. ಹ್ಞಾ. ಇದ್ದಕ್ಕಿದ್ದಂತೆ ಅವರಿಗೆ ಯಾವುದೋ ಕತೆಯಲ್ಲಿ ಏನೋ ಅಂಶ ಓದಿದ ನೆನಪು ಬಂದು, ತಮ್ಮದೊಂದು ಸಲಹೆಯನ್ನು ಪಿ.ಐ.ಗೆ ತಿಳಿಸಿದರು. "ಅರೆಸ್ಟ್

ಹೇಗೆ ಮಾಡ್ತೀರಿ, ಇವ್ರೇ, ಸಾಕ್ಷಿ ಇಲ್ಲ, ಪುರಾವೆ ಇಲ್ಲ. ಈ ಬಗ್ಗೆ ಅನುಮಾನ ಇದ್ರೆ ಅದೇನೋ "ದೃಷ್ಟಿ ಖೈದು" ಅಂತ ಮಾಡ್ತಾರಂತಲ್ಲ ಅದು ಮಾಡಿ. 'ನಜರ್ ಬಂದ್' ಮಾಡಿದ್ರೆ ಆಪಾದಿತನನ್ನು ಜೈಲಿನಲ್ಲಿಟ್ಟುಕೊಳ್ಳೋಲ್ಲ. ಆದ್ರೆ ಆ ಖೈದಿಯ ಮೇಲೆ ಸದಾ ಪೋಲೀಸರ ನಿಗಾ ಇರುತ್ತೆ ಅಂತ ಕೇಳಿದ್ದೀನಿ. ನೀವೂ ಹಾಗೇ ಮಾಡಿ ಇನ್ಸ್‌ಪೆಕ್ಟರೇ. ದಯಾಕರ. ಅವನ ಹೆಂಡತಿ ಅವರ ಪಾಡಿಗೆ ಅವರಿರಲಿ. ತಾವು ಒಂದಿಬ್ಬರು ಪೇದೆಗಳನ್ನ ಅವರ ಬೆಂಗಾವಲಿಗೆ ಇಡಿ ಅಷ್ಟೇ ಆಗೋಲ್ವಾ ಹಾಗೆ" ? ವಸಂತರಾವ್ ಹೇಳಿ ಮುಗಿಸುವ ತನಕ ತಿರಸ್ಕಾರದಿಂದೆಂಬಂತೆ ಕೇಳಿಸಿಕೊಂಡ ಪಿ.ಐ.ಗೆ ಎಲ್ಲಿಲ್ಲದ ಸಿಟ್ಟು "ಆಗೋಲ್ಲಪ್ಪ ಅದೆಲ್ಲ ಇಲ್ಲಿ" ಪೆದ್ದರಿಗೆ ಗದರಿಸುವವರಂತೆ ಹೇಳಿದರು. ಅವರು, "ಅಯ್ಯೋ ನಮಗೆ ಕಾನೂನು ಹೇಳಿಕೊಡೋಕೆ ಬರ್‍ತಾರೇನೋ. ತುದಿ ಬುಡ ಗೊತ್ತಿಲ್ಲ ಕಾನೂನಿನ ಬಗ್ಗೆ—" ಎಂದು ಸ್ವಲ್ಪ ತಡೆದು" ಹ್ಞಾ, ಇವರನ್ನು ಇನ್ನು 24 ಘಂಟೆ ನಮ್ಮ ಬಂದೋಬಸ್ತಿನಲ್ಲಿಟ್ಟುಕೊಂಡು, ನಮ್ಗೆ ಬೇಕಾದ ವಿವರಗಳನ್ನೆಲ್ಲ ತಿಳಿದುಕೊಂಡು, ಸಿಕ್ಕದಿದ್ದರ, ಸೆರೆವಾಸ, ಸಕಾರಣವಿದ್ದರೆ ಮುಂದುವರಿಸಬಹುದು, ಅಷ್ಟರೊಳಗೆ ವಾಪಸ್ ಕಳಿಸಲೂಬಹುದು," ಎಂದವರೇ, ದಯಾಕರನತ್ತ ತಿರುಗಿ," ಎಂದು ಆದೇಶಿಸಿ ಮುನ್ನಡೆದರು.

"ಊಹ್ಞೂ. ನೀವು ಅರೆಸ್ಟ್ ಮಾಡಲು ಆರ್ಡರ್ ತೋರಿಸದೇ, ನಾನು ಸ್ಟೇಶನ್‌ಗೆ ಬರಲ್ಲ" ದಯಾಕರ ಹಟ ಹಿಡಿದ.

"ರೈಟಿಂಗ್‌ನಲ್ಲಿ ತೋರಿಸ್ತೀವಿರೀ. ಇವತ್ತೇ ನಮ್ಮ ಕಾಂಪಿಟೆಂಟ್ ಅಥಾರಿಟಿಯ ಸೈನ್ ಇರುವ ಆದೇಶವನ್ನೂ, ಅರೆಸ್ಟ್ ಮಾಡೋಕೆ ಕಾನೂನು ಎರಡನ್ನೂ ತಿಳಿಸುವ ಆರ್ಡರ್ ಕಾಪೀನೂ ಕೊಡ್ತೀನಿ, ಈಗ ನಾನು ಹೇಳಿದ ಹಾಗೆ ಕೇಳ್ಕೊಂಡು ತೆಪ್ಪಗೆ ನಂಜೊತೆ ನಡೀರಿ" ಎಂದವರೇ ದಯಾಕರನ ಕೈ ಹಿಡಿದೇ ಬಾಗಿಲ ಕಡೆ ನಡೆದರು.

ವಸಂತರಾವ್‌ರವರ ಈ ಸೂಚನೆ, ನಿರುಪಯೋಗಗೊಂಡಾಗ, ಅವರ ತಲೆ ಇನ್ನೊಂದು ದಿಕ್ಕಿನಲ್ಲಿ ಓಡಿತು. ದಯಾಕರ ತನ್ನ ಮನಸ್ಸಿನಲ್ಲಿದ್ದುದನ್ನು ತಿಳಿಸುವ ಮೊದಲೇ ಅವರೇ ಮಗನಿಗೆ ಹೇಳಿದರು, "ದಯಾ

ಯೊಚ್ನೇ ಮಾಡ್ಬೇಡ, ಸುಮ್ನೇ ಸಿಟ್ಕೊಂಡ್ಕೊಳ್ಳೇ ಆರಾಮಾಗಿ ಏನೇ ಕೇಳಿದ್ರೂ ಉತ್ರ ಹೇಳು. ನಾನು ಈಗ ಇನ್ನೊಮ್ಮೆ ಲಾಯರ್ ಹತ್ರ ಹೊಬ್ಗರ್ತೀನಿ. ಬೆಳಿಗ್ಗೇನೇ ಹೋಗಿದ್ದೆ ಸಿಗಲಿಲ್ಲ. ಈ ಪೋಲೀಸಪ್ನೋರು ಏನೋ ತಮ್ಮ ಇಷ್ಟದಂಗೇ ಕಾನೂನು ಇದೇಂತ ತಿಳ್ಕೊಂಡಿದ್ದಾರೋ ಇಲ್ಲಾ ಇವರಿಷ್ಟದಾಂಗೇ ಕಾನೂನು ನಿಜವಾಗ್ಲೂ ಇದೆಯೋ ನಮ್ಗಂತೂ ಒಂದೂ ತಿಳಿಯೋಲ್ಲ".

"ಹೌದಪ್ಪ, ನಾನೇ ಹೇಳ್ಬೇಕಂತಿದ್ದೆ. ಲಾಯರ್ ಸಿನ್ಹಾಕಡೆ ಹೋಗ್ಬರ್ತೀರೇನು"?

"ಇಲ್ಲ, ರಾಜಾರಾಯರ ಹತ್ರನೇ ಹೋಗ್ತೀನಿ. ಈಗ 11 ಘಂಟೆಗೆ ಹೋದ್ರೆ ಸಿಗ್ಬಹುದು. ಅವರ ಸ್ನೇಹಿತರೊಬ್ಬರು ರಾಜಾರಾಯರ ಜಾಣ್ಮೆ ಪ್ರಖ್ಯಾತಿ ಇವುಗಳ ಬಗ್ಗೆ, ಯಾವುದೋ ಮಾತಿನ ಮಧ್ಯೆ ವರ್ಣನೆ ಮಾಡಿದ್ದನ್ನು, ಅವರ ನೆನಪು, ಅವರ ಮುಂದೆ ಕೆದಕಿ ಹಾಕಿ ರಾಜಾರಾಯರ ಮನೆಗೆ ಕಳಿಸಿತ್ತು ಬೆಳಿಗ್ಗೆ. "ಯೋಚ್ನೆ ಮಾಡ್ಬೇಡ ದಯಾ, ಎಲ್ಲಾ ಸರಿ ಹೋಗುತ್ತೆ, ಜಾಮೀನಿಗೂ ನಾನು ವಿಚಾರಿಸಿ. ಏರ್ಪಾಟು ಮಾಡ್ತೀನಿ.

"ಹುಂ, ನಡೀರಿ. ಸಾಕ್ಷಿ ಮತ್ತು ದಾಖಲೆಗಳು ಸಿಗೋವರೆಗೇನೇ ನಾವೂ ನಿಮ್ಮನ್ನ ನಮ್ಮ ಕಸ್ಟಡಿಯಲ್ಲಿಟ್ಕೊಳ್ಳೋದು" ಎಂದು ದಯಾಕರ ನಿಗೆ ತಿಳಿಸಿದ ಪಿ. ಐ.ರವರು, ವಸಂತ ರಾಯರತ್ತ ತಿರುಗಿ ಮತ್ತೆ ಹೇಳಿದರು. "ಇನ್ನು 24 ತಾಸು ಇವರು ನಮ್ಮ ಬಂಧನದಲ್ಲಿರ್ತಾರೆ. ಆಮೇಲೆ ಬಿಟ್ಟರೂ ಬಿಡಬಹುದು ಅಥವಾ ಇನ್ನೂ ಕೆಲವು ದಿನ ಜುಡಿಷಿಯಲ್ ಕಸ್ಟಡಿನಲ್ಲಿ ಉಳಿಸಿಕೊಳ್ಳಲೂಬಹುದು ತಿಳೀತಾ"? "ಹ್ಞಾ ಮಿಸೆಸ್, ದಯಾಕರ್ ನೀವು ಬಿಡುಗಡೆ ಅದೆ ಅಂದ್ಕೋಬೇಡಿ, ನಿಮ್ಮ ಮೇಲೂ ನಮ್ಮ ಕಣ್ಣು ಇದ್ದೇ ಇರುತ್ತೆ".

ದಯಾಕರ ಬಾಗಿಲು ದಾಟಿದಾಗ ವಸಂತರಾವ್ ತಲೆ ತಗ್ಗಿಸಿದರು. ಸುಮಾ ಕಣ್ಣೀರಿಳಿಸಿದಳು. ತಾಯಿಗೆ ತಲೆ ಸುತ್ತಿ ಬಂದಂತಾಗಿ ನಿಂತಲ್ಲೇ ಕುಸಿದು ಕುಳಿತರು. ವಾಪಸ್ ಓಡಿ ಬಂದ ದಯಾಕರ ತಾಯಿಯನ್ನು ಮೇಲೇತ್ತಿ ಕೂಡಿಸಿ, ಇದನ್ನೆಲ್ಲ ಸಹಿಸಲಾಗದೇ ಪಿ. ಐ. ರವರ ಮೇಲೆ

ರೇಗಿ ಕೂಗಿದ, "ಏನಯ್ಯಾ ಇನ್ಸ್‌ಪೆಕ್ಟರ್ ಶೇಖರ್? ದುಡ್ಡು ಕೊಡ್ಲಿಲ್ಲಾಂತ ಅರೆಸ್ಟ್ ಮಾಡ್ತಿರೋದ ನೀನು? ಇಲ್ಲದಿದ್ರೆ ಕೇಸ್ ಖುಲಾಸ್ ಮಾಡಿಸಬಹುದಿತ್ತಲ್ಲ ಸಾಗರಪ್ಪ? ಇಬ್ಬರ ಕಡೆಯೂ ನೋಡಿ ಸಿಟ್ಟಿನಿಂದಲೇ ಭೇಡಿಸಿದ ಅವನು.

"ನಿಜ ಏನೂಂತ ಬಾಯಿ ಬಿಡಿಸೋಕೆ ಎಲ್ಲಾ ದಾರಿನಲ್ಲೂ ಪ್ರಶ್ನೆ ಹಾಕಬೇಕಾಗುತ್ತೆ. ನಿಜವಾಗ್ಲೂ ನಮಗೆ ದುಡ್ಡಿನಾಸೆ ಅಂತ ಅಂದ್ಕೋಬೇಡ ನೀನು" ಅಸಿಸ್ಟೆಂಟ್ ಸಾಹೇಬರೂ ಸಿಟ್ಟಿನ ಜೊತೆ ಏಕವಚನಕ್ಕಿಳಿದರು.

"ಪ್ರೊಸೀಜರ್ ಅಂದ್ರೆ ಪ್ರೊಸೀಜರ್, ಕೊಲೆ ಮಾಡಿರಲಿ, ಇಲ್ಲದಿರಲಿ. ಯಾವುದೂ ತೀರ್ಪು ಹೊರಬರೋ ತನ್ಕ, ನಮ್ಮ ಪ್ರೊಸೀಜರ್ ನಾವು ಫಾಲೋ ಮಾಡ್ತೀವಿ. ಈಗ ಸುಮ್ನೇ ಪೋಲೀಸ್ ಸ್ಟೇಷನ್‌ಗೆ ನಡಿ, ಕೊಲೆ ಮಾಡದಿದ್ದವನಿಗೆ ಭಯ ಯಾಕೆ. ವಿಚಾರಣೆ ಮಾಡಿಸಿಕೊಳ್ಳಲಿಕ್ಕೆ"? ಪೋಲೀಸ್ ಆಫೀಸರ್ ಶೇಖರ್ ಗದರಿ ಆದೇಶಿಸಿದರು.

"ಭಯ ಅಲ್ಲಯ್ಯಾ, ವಿನಾಕಾರಣ ಪೋಲೀಸ್ ಸ್ಟೇಷನ್‌ನಲ್ಲಿ ಇರ್ಬೇಕಲ್ಲಾ ಅನ್ನೋ ಬೇಜಾರು ಅಷ್ಟೆ, ವಿಚಾರಣೆ ಬಗ್ಗೆ ಅಲ್ಲ.. ನನ್ನ ಹೀಗೆ ಕಟ್ಟಿಹಾಕಿ ಬಿಟ್ರೆ ಮುಂದಿನ ಕೆಲ್ಸ ಹೇಗೆ ಮಾಡ್ಕೊಳೋದು ಅಂತ ಯೋಚನೆ. ಒಬ್ಬ ಲಾಯರ್‌ನ ಭೇಟಿ ಮಾಡೋಣ ಅಂದ್ರೆ ಅದಕ್ಕೂ ಬಿಡಲ್ಲ ನೀವು ಥತ್ : ನಿಮ್ಮಂಥೋರಿಗೆ ಏನೇನೋ ಅಧಿಕಾರ ಕೊಟ್ಟಿದ್ದಾರಲ್ಲ ಅಂತ ಸಿಟ್ಟು. ಬೇವಕೂಫ್‌ಗಳು ಎಲ್ಲ. ಯಾರೋ ಕೊಲೆ ಮಾಡಿದ್ರೆ ಯಾರನ್ನೋ ಹಿಡಿಯೋದು, ಯಾರಿಗೋ ಜೈಲಿಗೆ ಹಾಕೋದು, "ಸಿಟ್ಟಿನಲ್ಲಿ ಹೊರಬಂದಿದ್ದೆಲ್ಲ ಒದರಿ ಬಿಟ್ಟ", ಬಂದವರ ಮನದಲ್ಲಿ ಇಲ್ಲದ ಸೇಡು, ಶಂಕೆಗಳು ಹುಟ್ಟಬಹುದೆನ್ನುವ ಆಲೋಚನೆಯೂ ಮಾಡದೇ, ಪೋಲೀಸ್ ಇಲಾಖೆಯವರ ಕಣಕಣದಲ್ಲೂ ಕೋಪ ಕಾರಂಜಿಯಾಗಿ ಚಿಮ್ಮಿತ್ತು.

ಗಾಬರಿಯಿಂದ ಅತ್ತೆಯ ಶುಶ್ರೂಷೆಯಲ್ಲಿ ತೊಡಗಿದ್ದ ಸುಮನಾಗೆ. "ನಿಮ್ಮ ಗಂಡನಿಂದ ಎಲ್ಲ ವಿಷಯಗಳನ್ನು ಹೊರಗೆಳೆದು ಸಂಗ್ರಹಿಸ್ತೀವಿ. ನೀವೂ ಮನೆಯಲ್ಲೇ ಕೂತು ಕುಮಕ್ಕು ಮಾಡ್ಬೇಡಿ" ಎಂದು ಇನ್ನೊಮ್ಮೆ

ಆದೇಶಿಸಿ, ದಯಾಕರನೊಂದಿಗೆ ಮಾತೇ ಆಡದೇ ತಮ್ಮ ಕೋಲು ಬೀಸಿ ಜೀಪಿನತ್ತ ತೋರಿದರು. ಪೋಲಿಸ್ ಆಫೀಸರ್ ಶೇಖರ್ ತನ್ನ ತಂದೆಗೆ ಮತ್ತು ಹೆಂಡತಿಗೆ ಸಮಾಧಾನ ಹೇಳಿ, ತಾಯಿಯ ಭುಜ ತಟ್ಟಿ ಜೀಪು ಹತ್ತಿದ ದಯಾಕರ.

ಅಲ್ಲಿಂದ ಸೀದಾ ಹಿಂದಿನ ದಿನ ನಡೆದ ಘಟನೆಯ ಸ್ಥಳಕ್ಕೆ ಕರೆದೊಯ್ಯುವಂತೆ ದಯಾಕರನಿಗೆ ಕೇಳಿದರು. ಪಿ. ಐ. ಮತ್ತು ಅವರ ಅಸಿಸ್ಟೆಂಟ್ ಆಫೀಸರ್. ಕಾರು ನಿಲ್ಲಿಸಿದ್ದೆಲ್ಲಿ ? ಅವನು ಬಿದ್ದದ್ದು ಹೇಗೆ ? ಯಾವ ರೀತಿ ಮಲಗಿದ್ದ ? ಇತ್ಯಾದಿ ಪ್ರಶ್ನೆಗಳು ದಯಾನ ಮುಂದೆ ಪುನರಾವರ್ತಿಸಿದವು. ಪ್ರಶ್ನೆ. ಉತ್ತರ, ಸವಾಲು. ಜವಾಬು. ವಿಚಾರಣೆ, ವಿವರಣೆ, ಇತ್ಯಾದಿಗಳೆಲ್ಲ ದಯಾನ ಮೇಲೆ .3ನೇ ಸಲ ಬಿದ್ದು ಬಿದ್ದು ತಲೆ ಚಿಟ್ಟು ಹಿಡಿಸಿದುವು.

ದಯಾಕರನ ತಂದೆ ವಸಂತರಾವ್, ಹೆಂಡತಿಗೆ ಯಾವುದೋ ಟ್ಯಾಬ್ಲೆಟ್ ನುಂಗಿಸಿ ಅತ್ತೆಯನ್ನು ಹುಶಾರಾಗಿ ನೋಡಿಕೊಳ್ಳುವಂತೆ ಸುಮಾಗೆ ಹೇಳಿ, ಕೂಡಲೇ, ಪ್ರಖ್ಯಾತ ವಕೀಲರಾದ ರಾಜಾರಾಯರ ಮನೆಯತ್ತ ನಡೆದರು. ರಾಜಾರಾಯರು ಮನೆಯಲ್ಲೇ ಇದ್ದರು. ಅವರಿಗೆ, ಹಿಂದಿನ ರಾತ್ರಿ ನಡೆದ ಘಟನೆಯನ್ನೆಲ್ಲ ವಿವರಿಸಿ ಹೇಳಿದರು ; ವಸಂತರಾಯರು. ನಿಜವಾಗಲೂ ನಿರಪರಾಧಿಯಾದ ದಯಾನಿಂದ ಹೆಚ್ಚು ಗಿಟ್ಟಿಸಲಾಗದು, ಎಂಬ ಭಾವನೆಯಿಂದ, ರಾಜಾರಾಯರು ಈ ಕೇಸಿನ ಬಗ್ಗೆ ಹೆಚ್ಚು ಆಸಕ್ತಿಯೆ ತೋರಿಸಲಿಲ್ಲ. "ನಾನು ಈಗ ಹಿಡಿದಿರೋ ಕೇಸ್‌ಗಳೇ ವಿಪರೀತವಾಗಿಬಿಟ್ಟಿವೆ : ವಸಂತರಾವ್, ಇದನ್ನೂ ಒಪ್ಪಿಕೊಂಡು ಬಿಟ್ಟರೆ ಓಡಾಡೋದು ಕಷ್ಟ. ನಿಮಗೆ ಬೇಕಾದ್ರೆ ನನ್ನ ಫ್ರೆಂಡ್ ಒಬ್ರು ಇದಾರೆ, ಅವರ ಬಳಿ ಹೋಗಿ ಅವ್ರು, ಈ ಕೇಸ್ ಡೀಲ್ ಮಾಡಬಹುದು" ಎಂದು ನಿರುತ್ಸಾಹದಿಂದ ಕೈಕೊಡವಿಬಿಟ್ಟರು.

ಆದರೆ ವಸಂತರಾವ್ ಅಷ್ಟಕ್ಕೇ ಬಿಡಲಿಲ್ಲ, ಪುನಃ ಪುನಃ, ತಮ್ಮ ಸಂದಿಗ್ಧ ಪರಿಸ್ಥಿತಿಯ ವಿವರಣೆ ನೀಡಿ, ನೀವೇ ಈ ಪ್ರಕರಣ ಪೂರ್ಣಗೊಳಿಸಿಕೊಡಬೇಕೆಂದೂ, ನಿಜವನ್ನು ಪ್ರಮಾಣಿಸಿಕೊಟ್ಟರೆ, ಒಂದು ಸಾವಿರ

ರೂಪಾಯಿ ಬೇಕಾದರೂ ಕೊಡಲು ತಯಾರು ತಾವು ಎಂದೂ ತಿಳಿಸಿದರು. ಹಾಗೂ ಮಗನನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿಸಿ .ಕರೆತರಲು ತಾವೇ ಸಹಾಯ ಮಾಡಬೇಕೆಂದೂ ಕೇಳಿಕೊಂಡರು. ತುಂಬಾ ಹೊತ್ತು ಆಲೋಚಿಸಿ "ನಂಗೆ ಬಿಡುವೇ ಇಲ್ಲ ರಾಯ್ರೇ. ಅದಕ್ಕೇ ಹೇಳ್ದೆ" ನನ್ನ ಸ್ನೇಹಿತರ ಹತ್ರ ಹೋಗೀಂತ. ಅವ್ರೂ ತುಂಬಾ ಚಾಲಾಕು ಮನುಷ್ಯ" ರಾಜಾರಾಯರು ಆರಂಭಿಸಿದುದನ್ನು ಅರ್ಧಕ್ಕೇ ತಡೆದು ಬೇಡಿದರು ವಸಂತ ರಾವ್. "ನಂಗೆ ಬೇರೆ ಯಾರ ಬಳಿಗೂ ಹೋಗಲು ಇಷ್ಟವಿಲ್ಲ ವಕೀಲರೇ. ನೀವೇ ಈ ಸಮಸ್ಯೆ ಬಿಡಿಸಿಕೊಡಬೇಕು, ನೀವು ಕೇಳಿದಷ್ಟು ಕೊಡ್ತೀನಿ". ಎಂದು ವಸಂತರಾವ್ ಕೈಜೋಡಿಸಿ ಕುಳಿತುಬಿಟ್ಟಾಗ ರಾಜಾರಾಯರು ಒಪ್ಪಿ ಕೊಳ್ಳಲೇ ಬೇಕಾಯ್ತು. ಆಮೇಲೆ ಎಲ್ಲಕ್ಕೂ ಒಪ್ಪಿಕೊಂಡ ರಾಜಾರಾಯರು. ಪ್ರಕರಣದ ಆದಿ ಅಂತ್ಯಗಳನ್ನು ಇನ್ನೊಮ್ಮೆ ವಿಚಾರಿಸಿ, ತಮ್ಮ ಮಾತಿನಲ್ಲಿ ಆಶ್ವಾಸನೆ ಇತ್ತರು. "ಇನ್ನು ನೀವು ಯೋಚನೆ ಬಿಟ್ಟುಬಿಡಿ ರಾಯ್ರೇ. ನಾನು ಒಪ್ಪಿಕೊಂಡ ಮೇಲೆ ಆಯ್ತು. ನ್ಯಾಯವೋ ಅನ್ಯಾಯವೋ ಕೇಸ್ ಅಂತೂ ಗೆಲ್ಲಿಸಿಯೇ ತೀರ್ತೀನಿ. ಇದಕ್ಕೆ ಯಾವ ಆಧಾರವೂ ಇಲ್ಲ ಈಗಂತೂ ಇದು ಹೇಗೆ ತಾನೇ ನಿಲ್ಲುತ್ತೆ ? ನಿಮ್ಮ ಮಗ ಸೊಸೆಯರ ಮೇಲೆ ಯಾವ ಆರೋಪವೂ ಉಳಿಯದ ಹಾಗೆ ಮಾಡ್ತೀನಿ. ಜಾಮೀನಿನ ಮೇಲೆ ಬಿಡಿಸಲು ಸಾಧ್ಯವೇ ಎಂಬ ಬಗ್ಗೆ ವಿಚಾರಿಸಿ. ಸ್ವಲ್ಪ ವ್ಯವಸ್ಥೆ ಮಾಡೋಣ ಹೋಗ್ಬನ್ನಿ. ಮುಂದಿನದು ನಾನು ನೋಡ್ಕೊಳ್ತೀನಿ.

ವಸಂತರಾವ್ ಮನೆಗೆ ಬಂದಷ್ಟೇ ತಡ, ಸುಧಾರಿಸಿಕೊಂಡು ಎದ್ದು ಕೂತ ಅವರ ಹೆಂಡತಿಯದು ಒಂದೇ ಗೋಣಗು "ನಮ್ಮ ಸೊಸೆ ಸುಮಾದು ಕಾಲ್ಗುಣ ಚೆನ್ನಾಗಿಲ್ಲ ಅನಿಸುತ್ತೇರೀ. ಏನೋ ಗುಣ, ನಡತೆ ಒಳ್ಳೆಯದಿದೆ ಅಂತ ಮಾಡಿಕೊಂಡ್ರೆ ಈ ತಾಪತ್ರಯ. ಬಂದು ಇನ್ನೂ ತಿಂಗ್ಳಾಗಿಲ್ಲ, ಆಗ್ಲೇ ಗಂಡನನ್ನೂ ಜೈಲಿಗೆ ಕಳ್ಸಿ. ತಾನೂ ಕೋರ್ಟ್ಗೆ. ಜೈಲುಗಳಿಗೆ ಒಡಾಡೋ ಹಂಗಾಯ್ತು ಮನೆ, ಮನೆತನದ ಹೆಸರೆಲ್ಲ ನೀರು ಪಾಲು ಆಗುತ್ತೆ ಇನ್ನು. ನಿಜ ಹೇಳಿದ್ರೂ ಅನುಮಾನ ಪಡೋರೆ ಜಾಸ್ತಿ ಜನ. ಸದ್ಯ, ಜೈಲಿಂದ ದಯಾಕರ ಹೊರಗೆ ಬರೋತನ್ಕ ನಮ್ಮನೆಗೆ ಯಾರೂ ಬರದಿದ್ರೆ

ಸಾಕು, ಹೋಗ್ಲಿ, ಇಬ್ರೂ ಹೋಗಿದ್ರೆ ಊರಿಗೆ ಹೋಗಿದಾರೆ ಅಂತ ಲಾದ್ರೂ .ಹೇಳಿ ತಪ್ಪಿಸ್ಕೋಬೋದಿತ್ತು ಬಂದ ಜನಗಳಿಗೆ; ಈಗ ಅದೂ ಆಗಲ್ಲ".

"ಅಬ್ಬ ; ಏನು ಬುದ್ಧೀನಪ್ಪ ನಿಂದು, ವಿಷಯ ಏನೂಂತ ಗೊತ್ತಾದ ಮೇಲೂ ಯಾಕೆ ಆ ಪಾಪದ ಹುಡ್ಗೀನ ಅಂತೀಯ. ಜನಗಳಿಗೆ ಗೊತ್ತಾಗ ಬಾರ್ದೂಂತ ಅವ್ಳೂ ಜೈಲಿಗೆ ಹೋಗಿದ್ರೆ ಚೆನ್ನಾಗಿತ್ತು ಅಂತೀಯಲ್ಲ ನಿನ್ನ ಬುದ್ಧಿಗೆ ಏನು ಹೇಳ್ಬೇಕು. ಸೊಸೆ ಜೈಲಿಗೆ ಹೋಗಿ ಕಷ್ಟ ಪಡೋದಕ್ಕಿಂತ ವಿಷಯವೇ ಗೊತ್ತಿಲ್ಲದ ಆ ಜನಗಳು ಕೊಡೋ ಮರ್ಯಾದೆ ಹೆಚ್ಚಾ ನಿಂಗೆ? ನಿನ್ನ ಮಗನ ಹೆಂಡತಿಗೆ ಬದ್ಲು ಆ ಪೊಳ್ಳು ಮರ್ಯಾದೆ ನಿನ್ನತ್ರ ಇರ್ಬೇಕು ಅಂತ ಬಯಸ್ತೀಯಲ್ಲ ? ಆಂ : ಅಬ್ಬಬ್ಬ" ಕೊಂಚ ರೇಗಿದ ದನಿಯಲ್ಲಿ ಹೇಳಿದರು ವಸಂತರಾಯರು,

"ಥೂ; ಅವ್ಳು ಜೈಲಿಗೆ ಹೋಗ್ಬೇಕಿತ್ತು ಅನ್ನಲಿಲ್ಲಾರೀ ನಾನು. ಅವರ ಟೂರ್ ಪ್ರೋಗ್ರಾಮ್ ಎಲ್ಲರಿಗೂ ಗೊತ್ತಿತ್ತು. ಈಗ ಒಬ್ಳೇ ಮನೇಲಿರೋದು ನೋಡಿದ್ರೆ ಯಾರಾದ್ರೂ ಕೇಳ್ಬಹುದು ಅಂದೆ ಅಷ್ಟೆ."

"ಹುಂ, ಅವ್ಳೇನು ಮಾಡೋಕಾಗುತ್ತೆ ಪಾಪ, ನಿನ್ನೆ ರಾತ್ರಿ ವಾಪಸ್ ಮನೆಗೆ ಬಂದಾಗ ದಯಾಕರ ಪೋಲಿಸ್ ವ್ಯಾನ್ ಹತ್ತುವಾಗ, ಅವಳ ಮುಖ ಎಷ್ಟು ಬಾಡಿ ಹೋಗಿತ್ತು ನೋಡು" ಎನ್ನುತ್ತಾ ವಸಂತರಾವ್ ಕಾಲು ತೊಳೆಯಲು ನಡೆದರು, ಒಳಗೆ.

ಅವರ ಹಿಂದೆಯೇ ನಡೆದ ಅವರ ಹೆಂಡತಿ, ಆ ಮಾತನ್ನು ಕೇಳಿಸಿ ಕೊಂಡರೂ, ತಮ್ಮ ಪಾಡಿಗೆ ತಾವು ಎನ್ನುವಂತೆ ಮುಂದುವರಿಸಿಕೊಂಡರು. "ಒಳ್ಳೆಯ ಹುಡುಗಿ ನಿಜ, ಆದ್ರೆ ಅದೃಷ್ಟ ? ಕಾಲ್ಗುಣ" ಹೀಗೆ ಎಂದು ಮದುವೆಗೆ ಮೊದ್ಲೇ ಗೊತ್ತಾಗಿದ್ದಿದ್ರೆ ಹೆಣ್ಣನ್ನೇ ಬಿಟ್ಟುಬಿಡಬಹುದಿತ್ತು. ಈಗ ಏನ್ಮಾಡೋಕಾಗತ್ತೆ. ಬಂದದ್ದನ್ನು ಅನುಭವಿಸಲೇ ಬೇಕಷ್ಟೆ. ದಯಾನೂ, ಅವಳು ಪಾಪ ಎಷ್ಟು ಖುಷಿಯಿಂದ ಪ್ರವಾಸ ಹೊರಟಿದ್ದು ಎಲ್ಲಾ ಹಣೆಬರಹ.

"ಅದೆಲ್ಲಾ ಬೇಡ ಈಗ- ನಂಗೆ ಹೊಟ್ಟೆಗೆ ಸ್ವಲ್ಪ ಏನಾದ್ರೂ ಹಾಕು. ಮುಂದಿನ ಕೆಲಸ ಏನು ಮಾಡೋದು ಅಂತ ಯೋಚ್ನೆ ಮಾಡೋಣ: ಹುಂ; ದಯಾನ ಪ್ರವಾಸ ಕಾರ್ಯಕ್ರಮಗಳೆಲ್ಲ ಕ್ಯಾನ್ಸಲ್ ಮಾಡಿಸ್ಬೇಕಾಗುತ್ತೋ ಏನೋ, ಅಥ್ವಾ ಈ ಲಾಯರ್ ಏನು ಹೇಳ್ತಾರೋ. ಬೇಗ ಮುಗಿದು ಹೋದ್ರೆ, ಶೀದಾ ಅಲ್ಲಿಂದ ಡೆಲ್ಲಿಗೆ ಹೋಗಿಬಿಡಬಹುದು. ನೋಡೋಣ ನಾಳೆ ದಯಾ ಏನು ಮಾಡ್ತಾನೋ, "ಸರ್ಕಾರಿ ಕಛೇರಿಗಳ ವ್ಯವಹಾರ, ಕೋರ್ಟಿನ ತೀರ್ಪು ಇವು ಕೊನೆಗೊಳ್ಳಲು ತೆಗೆದುಕೊಳ್ಳುವ ಸಮಯದ ಅಂದಾಜೇ ಇಲ್ಲದ ವಸಂತರಾವ್ ತಮ್ಮ ಅನಿಸಿಕೆ ತಿಳಿಸಿದರು.

"ಏನೂ ಮಾಡೋಕೆ ತೋಚ್ತಿಲ್ಲ. ಸುಮಾನೇ ಉಪ್ಪಿಟ್ಟು ಮಾಡಿಟ್ಟಿ ದಾಳೆ ಅನಿಸುತ್ತೆ. ಕೊಡ್ತೀನಿ ತಾಳಿ" ಎನ್ನುತ್ತಾ ಅಡಿಗೆ ಮನೆಗೆ ಹೋದರು. ಸುಮಾ ಅಲ್ಲೇ ಇದ್ದವಳು 3 ಪ್ಲೇಟ್‌ಗಳಿಗೆ ಉಪ್ಪಿಟ್ಟು ಹಾಕಿ, ತಾನೂ ಅವರೊಡನೆ ತಿನ್ನಲು ಕುಳಿತಳು. ತಿಂಡಿ ತಿನ್ನುವಾಗ ಒಬ್ಬರೂ ಮಾತಾಡ ಲಿಲ್ಲ. ದಯಾಕರನ ತಾಯಿಗೆ ಉಪ್ಪಿಟ್ಟೂ ಸೇರಲಿಲ್ಲ, ಸುಮ್ಮನೇ ಕೈಯ್ಯಾಡಿಸಿ ಮೇಲೇಳುತ್ತಾ ಹೇಳಿದರು, "ನಂಗೆ ಜ್ವರ ಬಂದಿದೆ ಅನಿಸುತ್ತೆ. ಏನೂ ರುಚಿ ಹತ್ತೋಲ್ಲ. ಸುಮ್ನೇ ಸುಸ್ತು, ಕೈ. ಕಾಲು ನೋವು, ಮಲಗಿರ್ತೀನಿ ಸ್ವಲ್ಪ" ಎಂದು.

"ಸರಿ ಹೋಗ್ರಮ್ಮ, ನೀವು ಸುಮ್ನೆ ಮಲಗಿ. ನಾನೆಲ್ಲ ಕೆಲ್ಸ ನೋಡ್ಕೋತೀನಿ". ಎಂದಳು ಸುಮಾ, ನೀರು ಕುಡಿಯುತ್ತ.

ನಿದ್ದೆ ಮಾಡಲಾಗದೇ, ಸುಸ್ತು ತಡೆದುಕೊಳ್ಳಲಾಗದೇ ತಮ್ಮ ಕೋಣೆ ಯಲ್ಲಿ ಹಾಸಿಗೆಯ ಮೇಲೆ, ಹೊರಳಾಡುತ್ತ ಮಲಗಿದ್ದ ತಾಯಿ, ಇನ್ನೂ ಸೊಸೆಯ ಕಾಲ್ಗುಣದ ಗುಂಪಿನಲ್ಲಿಯೇ ಇದ್ದರೋ ಏನೋ ವಸಂತರಾವ್ ಕೋಣೆಯೊಳಗೆ ಕಾಲಿಡುತ್ತಿದ್ದಂತೆಯೇ ಹೇಳಿದರು". ಏನು ಗ್ರಹಚಾರ ಇಂತೀನಿ. ಸುಮ್ಮ ಸುಮ್ನೆ ದಯಾ ಪೋಲೀಸ್ ಲಾಕಪ್‌ನಲ್ಲಿ ಇರ್ಬೇಕಾಗಿ ಬಂತಲ್ಲ ? ಅಲ್ಲಾ ಮದುವೆಗೆ ಮೊದಲಿನ ಶಕುನ, ಜಾತಕ, ಎಲ್ಲಾ ಚೆನ್ನಾಗೇ ಕೂಡಿ ಬಂದಿತ್ತಲ್ಲ ಈಗ ಯಾಕ್ರೀ ಹೀಗಾಯ್ತು ಅಂತ". ಈ ಕಾಲ್ಗುಣ

ನೀವು ಹೇಳಿದ ಹಾಗೆ ಬರೀ ಸುಳ್ಳೇನೋ – ಆದ್ರೆ ದಯಾ ಕೊಲೆಗಾರ ಅಂತಾಗಿಬಿಟ್ರೆ...."ಅಸಹನೀಯ ಬೇಸರದಲ್ಲಿ ಗೊಣಗಿಕೊಂಡರು ಅವರು.

"ನಿನ್ ತಲೆ ಸುಮ್ನೆ ಏನೇನೋ ಯೋಚಿಸ್ತೇಡಾ, ಈಗ ಜಾಮೀನ ಮೇಲೆ ಬಿಡಿಸಿಕೊಳ್ಳೋ ಬಗ್ಗೆ ಯೋಚ್ನೆ ಮಾಡೋಣ ಅಂದ್ರೆ, ಅಸಂಬದ್ಧ ಪ್ರಲಾಪ ಶುರು ಮಾಡಿದಿ" ಎಂದರು ರಾಯರು ರೇಗಿದ ಧನಿಯಲ್ಲಿ.

"ಅದಕ್ಕೂ ಇಂಥವರೇ ಆಗ್ಬೇಕೂಂತ ಏನಾದರೂ ಕಾನೂನು ಗೀನೂನು ಇದ್ಯೋ ಏನೋ ಅಥ್ವಾ ಯಾರಾದ್ರೂ ಹೆಸರುವಾಸಿಯಾದ ವರೋ, ಶ್ರೀಮಂತರೋ ಬೇಕೋ ? ಇಲ್ಲಾ ಇಷ್ಟು ದುಡ್ಡೂಂತ ಕಟ್ಟಿ ಬಿಟ್ರೆ ಸಾಕೋ ? ಎಲ್ಲಾ ಆ ವಕೀಲರನ್ನೇ ವಿಚಾರಿಸಬೇಕಿತ್ತು ನೀವು" ಏನೂ ತಿಳಿಯದೇ, ರಾಯರ ಪತ್ನಿ ತಮ್ಮ ಮಾತು ಹೇಳಿ ಮುಗಿಸಿ 'ಅಮ್ಮಾ' ಎಂದು ಮಲಗಿ ಮಗ್ಗಲು ತಿರುಗಿದರು.

ಮುಂದೆ ತಾವು ಮಾಡಬೇಕಾದುದ್ದೇನು ಎಂಬುದನ್ನು ಯೋಚಿಸುತ್ತಾ ಕುಳಿತರು ವಸಂತರಾಯರು. "ಮರ್ಡರ್ ಕೇಸ್ ಎಂದರೆ ಜಾಮೀನಿನ ಮೇಲೆ ಬಿಡುವುದೇ ಇಲ್ಲ. ಇದು ನಾನ್ ಬೇಲಬಲಾ ಆಫೆನ್ಸ್ ಎಂದರಲ್ಲವೇ ಆ ವಕೀಲರು. ಆದ್ರೂ ಪ್ರಯತ್ನ ಪಡ್ಬೇನಿ. ಜಾಮೀನಿನ ಮೇಲೆ ಬಿಡೋ ಹಾಗೆ ಕೇಳಿಕೊಳ್ಳೋಣ ಎಂದಿದಾರೆ. ಏನು ಗ್ರಹಚಾರವೋ ಏನೋ, ಜೇಲ್‌ನಲ್ಲಿ ಸುಮ್ ಸುಮ್ನೇ ಇರಬೇಕಾಗಿ ಬಂತಲ್ಲ ಈ ವಯಾಗೆ ಏನೇ ಆಗ್ಲಿ ಜಾಮೀನಿಗೆ ಎಷ್ಟು ಹಣ ಕಟ್ಟಬೇಕಾಗುತ್ತೋ ಅಷ್ಟು ಜೋಡಿಸಿಕೊಳ್ಳ ಬೇಕು" ಎಂದು ಏನೇನೋ ಆಲೋಚಿಸುತ್ತಲೇ ಕುಳಿತಿದ್ದರು ವಸಂತರಾಯರು.

ಸರ್ಕಲ್ ಇನ್ಸ್‌ಪೆಕ್ಟರರ ತಂಡ ಮುಂದೆ. ರಾಘವಪ್ಪಮರುಕಿನ ಮನೆಯ ಕಡೆಗೆ ಪ್ರಯಾಣ ಹೊರಟಿತು. ರಾಘವಪ್ಪ ಮರುಕಿನ ಮನಿ ಮನೆಯಲ್ಲಿರಲಿಲ್ಲ. ಕಾನೂನು ಓದಿದವರಿಗಿಂತ ಹೆಚ್ಚು ಅನುಭವಿಸಿ ಎಲ್ಲ ಅರಿತ ಚಾಣಾಕ್ಷ ಅವ ಸಾಧ್ಯವಾದಷ್ಟೂ ಬೇಗ ಸಾಕ್ಷಿಗಳನ್ನು ತಯಾರಿಸುವ ಕೆಲಸಕ್ಕೆ ತೊಡಗಿದ್ದನೋ ಏನೋ. ಮನೆಗೆಲಸದವಳನ್ನು ಬಿಟ್ಟು ಬೇರಾರೂ

ಮನೆಯಲ್ಲಿರಲಿಲ್ಲ. ಮನೆಯ ಒಳಕೋಣೆಯಿಂದ ಒಮ್ಮೆ ಕೇಳಿಬಂದ ವಿಚಿತ್ರವಾದ ಹಕ್ಕಿಯ ಕೂಗೂ ಯಾವ ಹಕ್ಕಿಯದು ಇರಬಹುದು ಎಂದು ಮಾತಾಡುತ್ತ ಕೂತ ಪೋಲಿಸ್ ಅಧಿಕಾರಿಗಳು ಮತ್ತವರ ಸಹಾಯಕರು ಅರ್ಧಘಂಟೆ ಕಾದ ಮೇಲೆ, ಮಗಳು ರಾಣಿಯೊಂದಿಗೆ ಮನೆಗೆ ಬಂದ ರಾಘವಪ್ಪ ಒಳಕೂತವರನ್ನು ಕಂಡದ್ದೇ ತಡ, ನಕ್ಕು ನಮಸ್ಕರಿಸಿ ಕೇಳಿದ. ಜೊತೆಗಿದ್ದ ಮಗಳೂ ಮೋಹಕವಾಗಿ ಮುಗುಳ್ನಕ್ಕು ನಮಸ್ಕರಿಸಿದಳು.

"ಓಹೋಹೋ; ಏನು ಇನ್ಸ್‌ಪೆಕ್ಟರೇ, ನಮಸ್ಕಾರ, ಎಷ್ಟೊತ್ತಾಯ್ತು ಬಂದು "?

"ಏನ್ರೀ ಎಲ್ಹೋಗಿದ್ರಿ ನಾವು ಬಂದು ಆಗಲೇ ಅರ್ಧಗಂಟೆ ಆಯ್ತು. ನಿನ್ನೆ ನಡೆದ ಘಟನೆಯ ಬಗ್ಗೆ ತಪಶೀಲು ಮುಂದುವರಿಸೋಕೇಬಂದ್ವಿ. ಇನ್ಮೇಲೆ ನಾವು ಕರೆದಾಗ ಹೇಳಿ ಕಳಿಸದಾಗಲೆಲ್ಲಾ. ಪೋಲೀಸ್ ಸ್ಟೇಷನ್‌ಗೆ ಬರ್ಬೇಕಾಗುತ್ತೆ ನೀವು". ಇನ್ಸ್‌ಪೆಲ್ಟರ್ ಶೇಖರ್ ಆರಂಭಿಸಿದರು. ತಮ್ಮ ಮಾಮೂಲು ಸೂಚನೆಯೊಂದಿಗೆ.

"ಖಂಡಿತ ಬರ್ತೀವಿ ಸಾರ್ ನಾನು. ರಾಣಿ, ಅಥ್ವಾ ಜಾರ್ಜ್ ಯಾರಿಂದ ಬೇಕಾದ್ರೂ ನಮಗೆ ತಿಳಿದ ವಿಷಯವನ್ನು ಕೇಳಿ ಸಂಗ್ರಹಿಸಿಕೊಳ್ಳಬಹುದು ಸಾರ್ ನೀವು". ಅತಿ ವಿನಯದ ದನಿಯಲ್ಲಿ ಅದರ ಬೆರೆಸಿ ಮಾತಾಡಿದ ಈ ರಾಘವಪ್ಪ, ನಿನ್ನೆ ತಲೆ ಕೆಡಿಸಿಕೊಂಡು ಬಡಬಡಿಸುತ್ತಿದ್ದ ರಾಘವಪ್ಪ ಅವನೇ ಹೌದೇ ಅಲ್ಲವೇ ಎಂದು ಅನುಮಾನ ಬರುವಂಥ ಬದಲಾವಣೆ ಅವನ ಇಂದಿನ ಮಾತಿನ ದಾಟಿಯಲ್ಲಿ.

"ಹಾಂ; ಈಗ ನಾವು ಕೇಳಿದ್ದಕ್ಕೆಲ್ಲ ನಿಜವಾದ ಅಂಶಗಳನ್ನು ತಿಳಿಸಿ, ಎಲ್ಲಾ ಪ್ರಶ್ನೆಗಳಿಗೂ ನಿಜವನ್ನೇ ಹೇಳ್ಬೇಕು".

"ಓಹ್. ನಾವು ಸುಳ್ಳು ಹೇಳ್ತೀವಾ ಸಾರಾ, ನಾನು ಕೊಲೆಗಾರನಾದ್ರೆ ಸುಳ್ಳು ಹೇಳೋದ್ರಲ್ಲಿ ಲಾಭ ಇರುತ್ತೆ. ಇರ್ಲಿಬಿಡಿ. ಇನ್ನೂ ಏನ್‌ಸಾರ್ ಕೇಳೋದಿದೆ. ನಿನ್ನೆಯೇ ನಿಮ್ಮತ್ರ ಎಲ್ಲಾ ಹೇಳಿ ಬಿಟ್ಟಿದೀನಿ ನಾನು. ನಮ್ಮ ಪರವಾದಿಸಿ ಕೇಸ್ ಗೆಲ್ಲಿಸಿ ಕೊಡಿ, ಅಷ್ಟೇ ಸಾಕು ಅದೇ ನಾನು ನಿಮ್ಮನ್ನು ಬೇಡಿಕೊಳ್ಳೋದು".

"ಬೇಡಿಕೊಳ್ಳುವುದು ಸುಲಭರೀ, ಆದ್ರೆ ಅದ್ನ ನಡ್ಸೋದು ಕಷ್ಟ" ಸಾಗರ್ ಹೇಳಿದರು.

"ಯಾಕೆ ಯಾರ ಅಡ್ಡಿ ಬರುತ್ತೆ ಇದಕ್ಕೆ? ಆ ವೈದ್ಯ ಒಬ್ರು ನಮಗೆ ಸರಿಯಾದ ರಿಪೋರ್ಟ್ ಕೊಟ್ರೆ ಆಗುತ್ತಲ್ವಾ? ನಡೆದಿದ್ದೇ ನಿಜ ಅಂತೆ, ಹಾಗೂ ನಮ್ಗ ಅನುಕೂಲ ಆಗೋ ಹಾಗೆ ಬರ್ಕೊಡಿ ಅಂತ ಸ್ವಲ್ಪ ಕೇಳಿ ದ್ರಾಯ್ತು ಅಲ್ವಾ?" ಎಂದ ರಾಘವಪ್ಪ ಅತ್ತಿತ್ತ ದೃಷ್ಟಿ ಹಾಯಿಸಿ, "ಆ ಡಾಕ್ಟರಿಗೆ ದುಡ್ಡು ಕೊಟ್ರೆ ಏನು ರಿಪೋರ್ಟ್ ಬೇಕಾದ್ರೂ ಕೊಡ್ತಾರಂತೆ ನಿಜವಾ ಇನ್ಸ್‌ಪೆಕ್ಟರೆ?" ಎಂದು ಮೆಲುದನಿಯಲ್ಲಿ ಕೇಳಿದ.

ಸಾಗರ್ ಮತ್ತು ಶೇಖರ್‌ರವರ ಮನಗಳಲ್ಲಿ ಧುತ್ತೆಂದು ತೂರಿಬಂದಿತು ಅನುಮಾನ. ರಾಘವಪ್ಪನ ರಿಪೋರ್ಟ್ ಸುಳ್ಳು ನೆವದ ಮೇಲೆ ಹುಟ್ಟಿ ಕೊಂಡದ್ದೇ? ಈ ಪ್ರಕರಣದ ತನಿಖೆ ಇನ್ನು ಸುಲಭಗೊಂಡಿತೆಂಬಂತೆ ಅವರ ಹೃದಯಗಳಲ್ಲಿ ನಿರಾಳವಾದ ಉಸಿರಾಟ ಸಂಚಾರ. ಹಾಗಾದರೆ ದಯಾಕರನ ಹೇಳಿಕೆ ನಿಜವೇ? ಆದರೆ ಇಷ್ಟು ಘನಂದಾರಿ ಅಧಿಕಾರಿಗಳಿಗೆ ಏಕವಚನದಲ್ಲಿ ಮೂದಲಿಸಿದ ದಯಾಕರನನ್ನು ಗತ್ತಿನಿಂದ ಅರೆಸ್ಟ್ ಮಾಡಿ ಬಂದ ತಾವೇ ಈಗ ಅವನಿಗೆ ಸೋತು, ಅವನನ್ನೇ ಗೆಲ್ಲಿಸಿ ಕೊಡುವುದೇ? ಅದೆಷ್ಟು ಕೀಳಾಗಿ ಹೇಳಿಬಿಟ್ಟನಲ್ಲಾ ಆ ಕುಳ್ಳ? "ನಿಂಗೆ ದುಡ್ಡು ಕೊಡಲಿಲ್ಲಾಂತ ಅರೆಸ್ಟ್ ಮಾಡ್ತೀಯಾ?" ಏನೋ ಕಳ್ಳತನವೋ ಕೊಲೆಯೋ ಏನೇ ಪ್ರಯತ್ನ ಮಾಡಿ ರಲಿ ಸ್ವಲ್ಪ ಕೊಟ್ರೆ ಬಿಡಿಸಿಬಿಡೋಣ ಅಂದುಕೊಂಡ್ರೆ ಹಾಗಾ ಮಾತಾ ಡೋದು. ಅವನಿಗೆ ಬುದ್ಧಿ ಕಲಿಸಲೇಬೇಕು. ಎನ್ನುವುದರ ಜೊತೆಗೆ ಪ್ರಕರಣವನ್ನು ಬೆಳೆಸಿ, ಇಬ್ಬರಲ್ಲೂ ಭಯ ಮೂಡಿಸಿ ಖಂಡಿತವಾಗಿ ಇಬ್ಬ ರಿಂದಲೂ ಹಣ ಹೊಡೆಯಬಾರದೇಕೆ ಎನಿಸುತ್ತದೆ ಈಗ. ಹಣವೂ ಗಳಿಸ ಬೇಕು, ದಯಾಕರನಿಗೂ ಬುದ್ಧಿ ಕಲಿಸಬೇಕು. ಹುಂ ಈಗ ನಿಜ ಏನು ಎನ್ನುವುದು ಕಂಡು ಹಿಡಿಯುವುದರ ಜೊತೆಗೆ ಇಲ್ಲಿ ಎಷ್ಟು ಗಿಟ್ಟುತ್ತೆ ಎನ್ನುವು ದನ್ನೂ ಮಾತಾಡಿ ಗುತ್ತಿಗೆ ಮಾಡುವ ಯೋಚನೆ ಇದೀಗ ಬಂದಿದೆ. ವೈದ್ಯ ನಿಗೆ ದುಡ್ಡುಕೊಡಲು ತಯಾರಾದ ರಾಘವಪ್ಪ, ಮುರ್ಕಿನಮನಿ ದೋಷಿ ಎಂಬುದು ಸ್ಪಷ್ಟ, ಎಂದುಕೊಂಡರು ಆ ಕ್ಷಣ. ಆದರೆ ತಮಗೇ ಸವಾಲು

ಹಾಕಿದ ದಯಾಕರ ಮತ್ತು ಅವನ ತಂದೆಯಲ್ಲಿ ದೋಷವಿದ್ದರೂ ಹತ್ತೆಂಟು ಸಾವಿರ ಕೊಡಲಾಗದ ಜಿಪುಣರಿರಬಹುದು 'ಸತ್ಯ ಹೊರಗೆಳೆತೀನಿ' ಎಂದು ಘೋಷಿಸಿ, ನಂಬಿಕೆ ಮೂಡಿಸುವ, ಅಥವಾ ಒಂದೆರಡು ಸಾವಿರಗಳಿಗೇ ಇಳಿಸಿಬಿಡುವ ಜಾಣ್ಮನವಿರಲೂಬಹುದು.

"ಯಾಕೆ? ನಿಮ್ಮ ಮಗನಿಗೆ ಮೂರ್ಛೆ ರೋಗ ಇತ್ತಾ ಹಾಗಾದ್ರೆ ವೈದ್ಯರಿಗೇಕೆ ದುಡ್ಡು ಕೊಡಬೇಕು. ಅವರು ಹೇಗಿದ್ರೂ ನಿಜವನ್ನೇ ರಿಪೋರ್ಟ್ ಮಾಡ್ತಾರಲ್ಲ? ಇನ್ಸ್‌ಪೆಕ್ಟರ್ ಸಾಗರ್ ಗಂಭೀರವಾಗಿ ಕೇಳಿದರು.

"ಛೆ, ಛೆ ಫಿಟ್ಸ್ ಇತ್ತೂಂತ ಅಲ್ಲ ನಾ ಹೇಳಿದ್ದು. ಆ ದಯಾಕರ ಏನಾದ್ರೂ ದುಡ್ಡು ಕೊಟ್ರೆ ವೈದ್ಯನ ಮನಸ್ಸು ಬದಲಾಗಿ ಆ ರಿಪೋರ್ಟ್‌ನಲ್ಲೂ ಬದಲಾವಣೆ ಕಾಣುವ ಛಾನ್ಸಸ್ ಇದೆಯೇ ಅಂತ ತಿಳ್ಕೊಳ್ಳೋಕೆ ಕೇಳ್ದೆ ಅಷ್ಟೇ ಸಾರ್. ಹಾಗೆ ಆ ವೈದ್ಯ ದಯಾಕರನ ಕಡೆ ಮನಸ್ಸು ಮಾಡೋದು ಬೇಡಾಂತ ಅಷ್ಟೆ. ಯಾಕೇಂದ್ರೆ ಈಗ ನಿಜಕ್ಕಿಂತ ದುಡ್ಡಿಗೇ ಬೆಲೆ ಜಾಸ್ತಿ ಅಲ್ವಾ ಸಾರ್. ಅದಕ್ಕೆ...ಹೆ...ಹೆ...ನೀವು ಇಂಥ ಎಷ್ಟೋ ಪ್ರಕರಣಗಳನ್ನು ನಿಭಾಯಿಸಿದ್ದೀರ. ಈ ಬಗ್ಗೆ ನಿಮ್ಗೆ ಗೊತ್ತಿರುತ್ತೆ ಚೆನ್ನಾಗಿ ಅಂತ ಕೇಳ್ದೆ" ರಾಘವಪ್ಪನ ಮಾತಿನಲ್ಲಿ ಚಾಣಾಕ್ಷತೆಯ ಮಿಂಚು.

"ಛೆ,ಛೆ,ಛೆ, ಇಲ್ಲ ಇಲ್ಲ ಬಿಡಿ. ಯಾರು ಹೇಳ್ದೋರು ನಿಮಗೆ ಇದನ್ನೆಲ್ಲಾ. ಹಾಗೆ ದುಡ್ಡು ಇಸ್ಕೊಂಡು ಸುಳ್ಳು ವರದಿ ಕೊಡೋ ವೈದ್ಯ ಮಹಾ ಗಟ್ಟಿಗನಿರಬೇಕು. ಯಾರೂ ಹಾಗೆ ಸುಳ್ಳುವರದಿ ಕೊಡೋ ಧೈರ್ಯ ಮಾಡಲ್ಲ. ಕೆಲಸ ಹೋಗಿ ಬಿಡಲ್ವೇನ್ರೀ ಫಾಲ್ಸ್ ರಿಪೋರ್ಟ್ ಕೊಟ್ರೆ. ನಿಮಗ್ಯಾರೀ ಹೇಳಿದ್ದು ಇದೆಲ್ಲ" ದಯಾಕರನೆದುರಿಗೆ, ಈ ವೈದ್ಯ ನನ್ನ ಅಂಗೈಯಲ್ಲಿ ಆಡುವ ಗೋಲಿ" ಎಂದ ಪೋಲೀಸ್ ಆಫೀಸರ್‌ನ ಅದೇ ನಾಲಿಗೆನಲ್ಲಿ ಮಗ್ಗುಲು ಬದಲಿಸಿ ತನ್ನ ಇನ್ನೊಂದು ಬಣ್ಣದಲ್ಲಿ ಮಿಂದು ಮಾತಾಡಿತ್ತು.

"ಹಾಗಾದ್ರೆ ಸರಿ ಬಿಡಿ. ಇನ್ನುಭಯಾನೇ ಇಲ್ಲ ನಂಗೆ. ನಂಗೆ ಯಾರೋ ಹೇಳಿದ್ರು ಹೀಗೇಂತ ಅದಕ್ಕೆ ಸ್ವಲ್ಪ ಭಯ ಆಗಿತ್ತು. ದಯಾಕರ ದುಡ್ಡುಕೊಟ್ಟು ಸತ್ಯವನ್ನು ಮುಚ್ಚಿಹಾಕಿಬಿಟ್ರೆ ಅಂತ. ನೀವೇ

ಹೇಳಿದ ಮೇಲೆ ಅನುಮಾನವೇ ಇಲ್ಲ ಅದರ ಬಗ್ಗೆ. ನಿಮ್ಮ ಪ್ರಶ್ನೆಗಳನ್ನ ಕೇಳಿ ಇನ್ನು" ನುರಿತ ವ್ಯಾಪಾರಿಯ ವಾಕ್ಚಾತುರ್ಯ ರಾಘವಪ್ಪನದು.

ಎದುರಿಗೆ ಕೂತವರು ಒಂದು ಕ್ಷಣ ತಬ್ಬಿಬ್ಬು. ತಾನಾಗಿಯೇ ಆರಂಭಿಸಿದವನು ಒಂದೇ ಮಾತಿಗೆ ಕೈಕೊಡವಿ ಬಿಟ್ಟನಲ್ಲಾ ಇವನು ಎಂದುಕೊಂಡು

ಸಹಾಯಕ ಪೋಲೀಸ್ ಆಫೀಸರೇ ಪುನಃ ಪ್ರಾರಂಭಿಸಿದರು, "ನೋಡಿ ನಿಮ್ಮಗ ಮನೆಯಿಂದ ಎಷ್ಟು ಗಂಟೆಗೆ ಹೊರಟ ಹೇಳಿ.

ರಾಘವಪ್ಪ : ಮಧ್ಯಾಹ್ನ 2½, 3 ಗಂಟೆಗೇ ಮನೆ ಬಿಟ್ಟ

ಶೇಖರ್ : ಸೀದಾ ರಾಮಪ್ಪನ ಮನೆಗೆ ಹೋಗುತ್ತೇನೆ ಎಂದಿದ್ದನೇ ಅಥವಾ ಇನ್ನೆಲ್ಲಾದರೂ ಹೋಗಿ ಅಲ್ಲಿಗೆ ಹೋಗುವವನಿದ್ದನೋ

ರಾಘವಪ್ಪ : ಎಲ್ಲೂ ಇಲ್ಲ, ನಾನೇ ಅವನಿಗೆ ಹತ್ತು ಸಲ ಹೇಳಿದ್ದೆ ಸೀದಾ ಹೋಗು ಅವರ ಮನೆಗೆ. ಎಲ್ಲೂ ಹೋಗಬೇಡ ಅಂತ. ದುಡ್ಡು ಕೊಟ್ಟು ರಸೀದಿ ಪಡೆದ ಮೇಲೆ ಬೇಕಾದರೆ ಎಲ್ಲಾದರೂ ಹೋಗಿಬಾ ಅಂದಿದ್ದೆ, ಆದ್ರೂ ನೋಡಿ ಸುಶೀಲನಗರದ 14ನೇ ಬ್ಲಾಕ್‌ನ ವಿಶ್ವಾಸ್ ಹೋಟೆಲ್‌ಗೆ ಕಾಫಿ ಕುಡಿಯಲು ಹೋಗಿದ್ದನಂತೆ,

ಶೇಖರ್ : ನಿಮ್ಗೆ ಯಾರು ಹೇಳಿದ್ರು ಅಲ್ಲಿ ಹೋಗಿದ್ದ ಅಂತ ?

ರಾಘವಪ್ಪ ; ದಯಾಕರ ವಿಶ್ವಾಸ್‌ನಲ್ಲಿ ಕಾಫಿ ಕುಡಿದ ಅಂದನಲ್ಲಾ, ನಾನು ಈ ದಿನ ಯಾವುದೋ ಕೆಲಸದ ಮೇಲೆ ಆಲ್ಲಿ ಹೋಗಿದ್ದೆ ಅವರ ಮಾಲಿಕನಿಗೆ ಕೇಳಿದಾಗ ಸುರೇಶ್ ಬಂದಿದ್ದನೆಂದು ಹೇಳಿದ.

ಸಾಗರ್ : ಈಗ ಎಲ್ಲಾ ಕಡೆ ಕಳ್ಳತನ, ದರೋಡೆ ಜಾಸ್ತಿ ಆಗಿವೆ. ಕ್ಷೇಮವಾಗಿ ಹಣ ತಲುಪಿಸುವ ಬೇರೆ ವಿಧಾನಗಳು ಇವೆ. ಡಿ.ಡಿ.ನೋ, ಚೆಕ್‌ನೋ ಅಥವಾ ಎಂ. ಓ. ನೋ ಮಾಡಬಹುದಿತ್ತಲ್ಲ. ಹುಡುಗನ ಕೈಯ್ಯಲ್ಲಿ ಹಣ ಯಾಕೆ ಕಳಿಸಿದ್ರಿ".

ರಾಘವಪ್ಪ : ಬೇಕಾದಷ್ಟು ಇದೆ ಸ್ವಾಮಿ, ಅದಕ್ಕೆ ಕಮಿಷನ್ ಬೇರೆ ಕೊಡ್ಬೇಕು. 10,000-00ಕ್ಕೆ ಎಂ,ಓ. ಮಾಡಿದ್ರೆ 100 ರೂ ಎಂ.ಓ. ಚಾರ್ಜ್ ಕಟ್ಟಬೇಕಾಗುತ್ತೆ. ಡಿ.ಡಿ.ಗೆ ಕಮಿಷನ್ ಕೊಡ್ಬೇಕು. ಹೋಗ್ಲಿ

ಅದು ಲೆಕ್ಕ ಬೇಡ ಅಂದ್ರೆ ರಾಮಪ್ಪನಿಗೆ ತುಂಬಾ ಅರ್ಜೆಂಟ್ ಇತ್ತು. ಹಣನೇ ಬೇಕು ಅದೂ ಇವತ್ತೆ ಬೇಕು ಅಂದಿದ್ದ ಧಿಡೀರಂತ ಕೊಡಲು ಅನು ಕೂಲವಾದದ್ದು ಮನೇಲಿಟ್ಟ ಕ್ಯಾಶ್‌ತಾನೇ" ? ಅದೂ ಬೇರೆ ಖರ್ಚಿಗೆ ಅಂತ ಜೋಡಿಸಿದ್ದ ಹಣ, ರಾಮಪ್ಪನ ಆತುರಕ್ಕೆ ಕೊಟ್ಟು ಬಿಡೋಣ ಅನಿಸಿತು. ತೆಗೆದು ಕಳಿಸಿದೆ.

ಸಾಗರ್ : ಅಷ್ಟೊಂದು ಹಣ ಕೊಟ್ಟು ನಿಮ್ಮ ಹುಡುಗನನ್ನೇಕೆ ಕಳಿಸಿದ್ರಿ ನೀವೇ ಯಾಕೆ ಹೋಗಲಿಲ್ಲ, ವಿಶ್ವಾಸ್ ಹೋಟೆಲ್ ಮಾಲೀಕನಿಗೆ ಸುರೇಶ್ ಯಾರು ಎಂದು ಗೊತ್ತಾ ?"

ರಾಘವಪ್ಪ: ಇಲ್ಲ ಗೊತ್ತಿಲ್ಲ. ನಾನು ಅವನು ಹೇಗಿದ್ದ ಎಂದು ವರ್ಣಿಸಿ 10,000 ಅವನ ಬಳಿ ಇತ್ತು ಎಂದು ಹೇಳಿದೆ. ಕೂಡಲೇ ಅವರು ಆ ಹುಡುಗ ಬಂದಿದ್ದ ಎಂದರು. ನಾನೇಕೆ ಹೋಗ್ಲಿಲ್ಲಾಂದ್ರೆ ನಂಗೆ ಬೆಳಿಗ್ಗೆ ಸಿಕ್ಕಾಪಟ್ಟೆ ತಲೆನೋವಿತ್ತು ಹೋಗಲಾಗಲಿಲ್ಲ. ಇನ್ನೊಂದು ನಾನು ಸುರೇಶನ್ನ ಚಿಕ್ಕ ಹುಡುಗ ಅಂದುಕೊಂಡಿಲ್ಲ. ವ್ಯಾಪಾರ, ವಹಿವಾಟುಗಳ ನ್ನೆಲ್ಲಾ ಅರಿಯಲಿ ಅಂತ ಅವನ್ನೇ ಕಳಿಸ್ದೆ. ನೋಡಿ, ಹೋಟೆಲ್‌ನಲ್ಲಿ ನಮ್ಮ ಸುರೇಶ ಹಣ ಬೀಳಿಸಿಕೊಂಡನಂತೆ. ದಯಾಕರನೂ ಆಗ್ಲೇ ಅಲ್ಲಿಗೆ ಕಾಫಿಗೆ ಬಂದಿದ್ನಂತೆ.

ಶೇಖರ್: ಒಳ್ಳೇದು. ನಾವೇ 'ವಿಶ್ವಾಸ್'ನ ಮಾಲೀಕರನ್ನು ಕಂಡು ವಿಚಾರಿಸಿಕೊಳ್ತೇವೆ. ಅಂದಹಾಗೆ ಸುರೇಶ ನಿಮ್ಮ ವ್ಯಾಪಾರಕ್ಕೆ ಸಹಾಯ ಮಾಡುತ್ತಿದ್ದನೇ?

ರಾಘವಪ್ಪ: ಅವನು ಇಲ್ಲಿ ಇರ್ಲೇ ಇಲ್ಲ. ನಮ್ಮ ಹಳ್ಳಿಯಲ್ಲಿ ಅವನ ತಾತನ ಜೊತೆಗೇ ಇದ್ದ ಇಷ್ಟು ದಿನ. ಅವರು ತೀರಿಕೊಂಡ ಮೇಲೆ, ಈಗ ಮೂರು ತಿಂಗಳ ಹಿಂದೆ ಇಲ್ಲಿಗೆ ಬಂದಿದ್ದಷ್ಟೆ.

ಶೇಖರ್: "ಅವರು ತೀರಿಕೊಂಡದ್ದು ಯಾವಾಗ?"

ರಾಘವಪ್ಪ: "ಮೂರು ತಿಂಗಳ ಹಿಂದಷ್ಟೆ ಎಂದೆನಲ್ಲ"?

ಶೇಖರ್: "ಈಗ ಹಳ್ಳಿಯಲ್ಲಿ ಯಾರಿದ್ದಾರೆ?"

ರಾಘವಪ್ಪ: ಯಾರೂ ಇಲ್ಲ, ಇದ್ದದ್ದೇ ಮುದುಕರೊಬ್ಬರೇ. ನನ್ನ ಹೆಂಡತಿಯ ತಂದೆ. ಇಲ್ಲಿಗೆ ಬರಲೂ ಒಪ್ಪದೇ ಅಲ್ಲೇ ಇದ್ದರು. ಸುರೇಶ ನಿಗೆ ಓದು, ಬರಹ ಹತ್ತಲಿಲ್ಲಾಂತ ಅಲ್ಲೇ ಇಟ್ಟುಕೊಂಡಿದ್ರು"

ಶೇಖರ್: ಈಗ ಮೂರು ತಿಂಗಳಿಂದ ಸುರೇಶ ನಿಮ್ಮ ಜೊತೆ ಕೂಡು ತ್ತಿದ್ದನೇನು ವ್ಯಾಪಾರದಲ್ಲಿ?

ರಾಘವಪ್ಪ: "ಇಲ್ಲ, ಅಜ್ಜ ಸತ್ತ ದುಃಖ ಕಡಿಮೆಯಾಗಲಿ ಎಂದು ಅವನಿಗೆ ಯಾವ ಕೆಲಸವನ್ನೂ ಹೇಳುತ್ತಿರಲಿಲ್ಲ"

ಶೇಖರ್: ಮುದುಕರಿಗೆ, ಅಂದ್ರೆ ನಿಮ್ಮ ಹೆಂಡತಿಯ ತಂದೆಗೆ ಬೇರೆ ಮಕ್ಕಳಿರಲಿಲ್ವಾ?"

ರಾಘವಪ್ಪ: "ಇಲ್ಲ, ಇವಳು ಒಬ್ಬಳೇ ಮಗಳು"

ಶೇಖರ್: ತಂದೆಯನ್ನು ಇಲ್ಲಿಗೇ ಬರುವಂತೆ ಯಾಕೆ ಬಲವಂತಿಸಲಿಲ್ಲ ಅವರು?"

"ಹೇಗೆ ಬಲವಂತಿಸ್ತಾಳೆ ಸಾರ್, ಅವಳು ಹಾಸಿಗೆ ಹಿಡಿದು ಹತ್ತು ಹನ್ನೆರಡು ವರ್ಷಗಳೇ ಆದವು. ಮೊದಲು ಒಂದು ಖಾಯಿಲೆ, ಆಮೇಲೆ ಒಂದು ಖಾಯಿಲೆ. ಈಗ : ವರ್ಷಗಳ ಹಿಂದೆ ಪಾರ್ಶ್ವವಾಯು ತಟ್ಟಿದ ಮೇಲೆ ಮಾತೇ ನಿಂತು ಹೋಗಿದೆ. ಆ ಬಾಯಿಯಿಂದ ಬರುವ ವಿಕಾರ ವಾದ ಶಬ್ಧವೇ ಅವಳ ಮಾತು ಅಷ್ಟೆ.

ಶೇಖರ್ ಮತ್ತು ಸಾಗರ್ ಈಗ ತಮ್ಮ ಗಮನವನ್ನು ಇನ್ನೊಮ್ಮೆ ಹರಿಸಿದರು. ಆಗಾಗ ನರಳುವ ಶಬ್ಧ, ಮಧ್ಯೆ ಹಕ್ಕಿಯಂತೆ ಅಥವಾ ಇನ್ನಾ ವುದೋ ಶಬ್ದದಂತೆ ಹೊರ ಬರುವ ಒಂದು ವಿಕಾರ ಕೂಗು, ಓ ನಾವು ಮನೆಯ ಒಳಗೆ ಕಾಲಿಟ್ಟ ಕೂಡಲೇ ಕೇಳಿಸಿಕೊಂಡಿದ್ದು ರಾಘವಪ್ಪನ ಹೆಂಡ ತಿಯ ನರಳಾಟದ ಆರ್ಭಟವೇ?" ಎಂದುಕೊಂಡರು ಈಗ.

ಶೇಖರ್ : "ನಿಮ್ಗೆ ದಯಾಕರನ ಮೇಲೆ ಯಾಕೆ ಅನುಮಾನ ರಾಘವಪ್ಪ

ಬೇರೆ ಯಾರಾದ್ರೂ ಮಾಡಿರಬಹುದು ನೀವು ಹೇಳಿದ ಕಳ್ಳತನ, ಅಲ್ವಾ ? ದಯಾಕರ ಸಾಕಷ್ಟು ಅನುಕೂಲಸ್ಥ ಕುಟುಂಬದವರು, ಅವರಿಗೆ ಬೇರೆಯವರ ಹಣದ ಮೇಲೆ ಮೋಹ ಇಲ್ಲವೇ ಇಲ್ಲ, ಈಗ ಬರೀ ಹನಿಮೂನ್ ಪ್ರವಾಸಕ್ಕೇ ಐದೋ ಹತ್ತೋ ಸಾವಿರ ಸಾವಿರ ರೂ. ಖರ್ಚಿನ ಯೋಜನೆ ಹಾಕಿಕೊಂಡ ಅವರಿಗೆ, ನಿಮ್ಮ ಜುಜುಬಿ 10,000 ರೂ. ಯಾರಿಗೆ ಬೇಕು ಅನ್ನುತ್ತಾರೆ. ಅದಕ್ಕಾಗಿ ಅವರು ಖಂಡಿತ ಕೊಲೆ ಮಾಡಿರೋಲ್ಲ".

ರಾಘವಪ್ಪ : "ಶ್ರೀಮಂತಿಕೆ ಬೆಳೆದದ್ದೂ ಈ ತರಹದ ಕಳ್ಳತನಗಳಿಂದಲೇ ಇರಬಹುದಲ್ಲಾ ಸಾರ್ ? ಅಷ್ಟೊಂದು ಅನುಕೂಲಸ್ಥನಾದ್ರೆ ಒಂದೈದು ಸಾವಿರ ಕೊಟ್ಟುಬಿಡಬಹುದಲ್ಲ ಸುಮ್ನೆ, ಈ ರಗಳೆ ಎಲ್ಲ ಯಾಕೇಂತ".

ಶೇಖರ್ : ದುಡ್ಡಿದೆ ಅಂದುಬಿಟ್ರೆ, ಯಾರು ಯಾತಕ್ಕೆ ಕೇಳಿದ್ರೂ ಕೊಟ್ಟು ಬಿಡ್ತಾರೇನ್ರಿ?" ಪ್ರಶ್ನಿಸಿದರು, ಶೇಖರ್ ಸ್ವಲ್ಪ ಜೋರಾಗಿಯೇ ? ರಾಘ ವಪ್ಪ ಹೇಳಿದ ಮಾತು ನಿಜವಿರಲೂಬಹುದು" ಅನ್ನಿಸಿದರೂ, ತೋರಿಸಿ ಕೊಳ್ಳದೇ ಹಾಗೆ ಸುಮ್ನೆ ಸುಮ್ನೆ ಎಸ್ದುಬಿಡೋರಲ್ಲ ಅವ್ರು. ಸತ್ಯ ಹೊರ ಗೇಳಬೇಕು ಅಂತಾರೆ" ಸಾಗರ್ ತಮ್ಮ ಮಾತು ಸೇರಿಸಿದರು.

ರಾಘವಪ್ಪ : "ಎಳೀಲಿ. ನಾನೂ ಅದೇ ಹೇಳೋದು, ಅವರಲ್ಲದಿದ್ರೆ ಇನ್ಯಾರೇ ಕೊಲೆ ಮಾಡಿದ್ರೂ ನಿಜಾಂಶ ಹೊರಬರಲೀಂತ, ಅವರಿಗೆ ಕಷ್ಟ ಆಗುತ್ತೆ ಆದ್ರೆ, ಇದೆಲ್ಲ ರಾಮಾಯಣ ಬೇಡ ಅಂತಿದ್ರೆ ಅವ್ನು ನನ್ನ ನಷ್ಟ ಕೊಟ್ಟುಬಿಡಲೀಂತ ನನ್ನ ಅಭಿಪ್ರಾಯ ಅಷ್ಟೆ".

ಶೇಖರ್: ಈ ಪ್ರಕರಣ ಎಷ್ಟು ರಾಮಾಯಣ ಆದ್ರೂ ಆಗಲಿ, ದುಡ್ಡು ಕೊಡೋಲ್ಲ ನಾನು ಅಂತ ಹಟ ಹೂಡಿದಾನೆ, ಆ ಹುಡುಗ"

ರಾಘವಪ್ಪನ ಮುಖ ಈಗ ಕೊಂಚ ಗಂಭೀರವಾದಂತೆ ಕಂಡಿತು.

"ಹೌದಾ? ಹಾಗಾದ್ರೆ ಈ ಪ್ರಕರಣ ಇಲ್ಲಿಗೇ ನಿಲ್ಲಿಸಿ, ಅವನಿಂದ ಹತ್ತುಸಾವಿರ ಇಸ್ಕೊಳ್ಳೋಕೆ ಆಗೋದೇ ಇಲ್ವಾ?" ಬಿಳಿಚಿಕೊಂಡ ಮುಖದಲ್ಲಿ ರಾಘವಪ್ಪನ ಪ್ರಶ್ನೆ. ಛೇ ಈ ಕೋರ್ಟಿನ ಓಡಾಟ ನಂಗೆ ವಿಪರೀತ ಬೇಜಾರು, ಆದ್ರೆ

ಅವನಿಗೆ ಅಷ್ಟೊಂದು ಧೈರ್ಯ ಇರುವಾಗ ನಾನಾದ್ರೂ ಯಾಕೆ ಹೆದರ್ಬೇಕು?" ಎನ್ನುವಾಗ ದುತ್ತ ಮುಖದಲ್ಲಿ ಮೊದಲಿನದೇ ಮೊಂಡು ಧೈರ್ಯ.

ರಾಘವಪ್ಪನ ಬದಲಾದ ಬಣ್ಣ ಕಂಡ ಸಾಗರ್ ಮತ್ತು ಪಿ.ಐ.ರವರ ಮುಖದಲ್ಲಿ ಆಸೆಯ ರಂಗು, ಒಟ್ಟಿಗೇ ಹೇಳಿದರು. "ಖಂಡಿತ ಆಗೋಲ್ಲ, ಅವನು ಒಂದೇ ಒಂದು ಪೈ ಕೂಡ ಕೊಡಲ್ಲ"

ರಾಘವಪ್ಪ ಕ್ಷಣ ಮೌನವಾಗಿ ಕೂತವನು ತಾನೇ ಅವರ ದಾರಿಗೆ ಇಳಿದ, "ಹಾಗಾದ್ರೆ ತಾವಿಬ್ಬರೂ ಸೇರಿ ಹೇಗಾದ್ರೂ ಈ ಕೇಸ್ ಗೆಲ್ಲಿಸಿ ಕೊಡಬೇಕು ಸಾರ್, ನನ್ನ ಮಗ ನನ್ನ ಜೊತೆಗೆ ಇದ್ರೆ ತಾನೇ ನಂಗೆ ಅವನ ಖಾಯಿಲೆ ಏನು ಅಂತ ಗೊತ್ತಾಗೋದು, ಅವನೊಂದು ಕಡೆ. ನಾನೊಂದು ಕಡೆ. ಹೇಳಿದ ಹಾಗೆ ಕೇಳೋ ಹುಡುಗ ಅಲ್ಲ ಅಂತ ನಾನವನ ಬಗ್ಗೆ ಹೆಚ್ಚು ಆಸಕ್ತಿವಹಿಸಲಿಲ್ಲ. ತುಂಬಾ ವೀಕ್‌ನೆಸ್ ಇದೆ ಅಂತಿದ್ದ. ಆದರೆ ನೋಡಲು ಮಾತ್ರ ಚೆನ್ನಾಗೇ ಇದ್ದ, ಫಿಟ್ಸ್ ಅಂತೂ ಅವನು ಈ ಮನೆಗೆ ಬಂದ ಮೇಲೆ ಅವನಿಗೆ ಒಂದು ಸಲವೂ ಬಂದಿಲ್ಲ. ಅಲ್ದೇ ನರವಸ್ ವೀಕನೆಸ್ ಇದೆ ಅಂತ ಯಾರೋ ಡಾಕ್ಟರೊಬ್ರು ಹೇಳಿದ್ರು ಅಷ್ಟೇ ವಿನಃ ನಾನು ಕಂಡಹಾಗೆ ಅವನಿಗೆ ಫಿಟ್ಸ್ ಯಾವತ್ತೂ ಬಂದಿಲ್ಲ, ಎಲ್ಲಾ ಈಗಿನ ಕಾಲ್ದೋವು ನೋಡಿ, ಏನಿದ್ರೂ ಮುಚ್ಚಿಡ್ತಾವೆ, ತಾವೂ ಹೇಳೋದಿಲ್ಲ, ನಾವು ಹೇಳಿದ್ದು ಕೇಳೋದೂ ಇಲ್ಲ, ಆ ಮೆಡಿಕಲ್ ರಿಪೋರ್ಟ್ ಏನು ಬರುತ್ತೋ ಗೊತ್ತಿಲ್ಲ, ಏನೇ ಇರ್ಲಿ, ಖಾಯಿಲೆಯಿಂದ ಸತ್ತ ಅಂತ ಅಂತೂ ನಂಗೆ ಖಂಡಿತಾ ಅನಿಸಲ್ಲ ಹುಡುಗನ ಮೇಲೆ ದಯಾಕರನ ಕೈವಾಡವಿದ್ದೇ ಇದೆ.

ಇದ್ದಕ್ಕಿದ್ದಂತೆ ಬಿದ್ದು ಸಾಯೋದು ಅಂದ್ರೇನು ಸ್ವಾಮಿ? ಸ್ವಲ್ಪ ಖರ್ಚಾದ್ರೂ ಪರ್ವಾಗಿಲ್ಲ ಸಾರ್, ದಯವಿಟ್ಟು ಈ ಕೇಸ್ ಗೆಲ್ಲಿಸಿ 35,000 ರೂ. ಪರಿಹಾರ ಕೊಡಿಸಿ ಕೊಡಿ. ನನ್ಹತ್ರ ಬೇರೆ ಹಣ ಇಲ್ಲ. ಈ ಪ್ರಕರಣದಲ್ಲೇ ಬರಬೇಕಾದ 25,000 ರೂ. ಬಂದ್ರೆ ಅದ್ರಲ್ಲೇ ನಿಮ್ಗೆ ಕೊಡ್ತೀನಿ ನಿಜವಾಗಲೂ ಸುರೇಶ್ ಹೇಗೆ ಸತ್ತ ಅಂತ ತನಿಖೆ ಮಾಡಿಸಿ. ಈ ಕೇಸ್‌ನಲ್ಲಿ ಸೋತ್ರೆ ಮಾತ್ರ ನನ್ನಲ್ಲಿ ನಿಮಗೆ ಕಾಫಿ ಕೊಡಿಸುವಷ್ಟು ದುಡ್ಡಿಲ್ಲ" ಎಂದು ಅಂಗಲಾಚುವಂತೆ ಹೇಳಿ, ಇಬ್ಬರ ಕಡೆಯೂ ತಿರುಗಿ ಕೈ ಮುಗಿದುಬಿಟ್ಟ.

"ಸರಿ ಸರಿ ಬಿಡಿ. ರೂ. 10,000 ಕಳ್ಳತನ ಆಗಿದೇಂತ, 35,000 ಪರಿಹಾರಾಂತ ನಿಮ್ಮ ಕಡೆ ಬರೋ ಹಾಗೆ ಮಾಡೋದೂಂದ್ರೆ ಸುಳ್ಳಿಗೆ ವಿಜಯದ ಮಾಲೆ ಹಾಕಿಸ್ಬೇಕು. ಆದ್ರೆ ತಿಳ್ಕೊಳಿ. ಇದು ಕೊಲೆ ಅಂತ ನಿರ್ಧಾರವಾದ್ರೂ ನಿಮ್ಗೆ 35,000 ರೂ. ಕೊಡಿಸೋಕೂ ಆಗಲ್ಲ. ಇದು ರಾಜ್ಯದ ನ್ಯಾಯಾಂಗದ ವಿರುದ್ಧ ನಡೆದಿರುವ ಮಹಾಪರಾಧ. ಇದು ಮರ್ಡರ್ ಅಲ್ಲದಿದ್ದರೂ ಮರ್ಡರ್ ಅನ್ನಿಸಿ, ಸುಳ್ಳನ್ನ ಗೆಲ್ಲಿಸೋಕಲ್ಲ ನಾವು ತನಿಖೆ ಆರಂಭಿಸಿರೋದು" ಪೋಲೀಸ್ ಇನ್‌ಸ್ಪೆಕ್ಟರ್ ಕೂಗಿ ಹೇಳಿದರು.

"ಯಾವ್ದು ಸುಳ್ಳು ಸಾರ್! ನನ್ನ ಮಗ ಸತ್ತಿರೋದು ಸುಳ್ಳಾ? ಹತ್ತು ಸಾವಿರ ರೂ. ಕಳ್ಕೊಂಡಿರೋದು ಸುಳ್ಳಾ? ನನಗೆ ದುಡಿಯುವ ಮಗ ಇಲ್ದೇ ಕಷ್ಟವಾಗಿರೋದು ಸುಳ್ಳಾ? ಕೊಲೆ ಅಲ್ಲ ಅಂತ ಖಚಿತವಾಗಿ ಹೇಗೆ ಹೇಳ್ತೀರಿ?"

"ವೀಕ್ ಇದ್ದ ಅಂತೀರಿ, ಫಿಟ್ಸ್ ಇದ್ಯೋ ಇಲ್ವೋಂತ ಗೊತ್ತಿಲ್ಲಾಂತೀರಿ, ಅಂದ ಮೇಲೆ ಸತ್ತಿರೋದೂ ಅವನು ಕೊಲೆಯಾಗಿಯೇ ಅಂತ ಹೇಗೆ ಗೊತ್ತು?"

ದಯಾಕರನ ವ್ಯಕ್ತಿಯೇ ಕಳ್ಳತನ ಅಂತ ಹೇಳ್ದೆ, ನನ್ನ ಮಗನ ಜೇಬಲ್ಲಿ ಹತ್ತುಸಾವಿರ ರೂ. ಇತ್ತೂಂತಲೂ ಹೇಳ್ದೆ, ಹೇಗೋ ಇಬ್ರೂ ಭೇಟಿಯಾಗಿ ಇವ್ನ ಹಣ ಅವ್ನು ಲೂಟಿ ಮಾಡಿಕೊಂಡಿರಬಹುದೂಂತ ನನ್ನ ಅನುಮಾನ ಅಂದೆ. ಫಿಟ್ಸ್ ಬಂದ್ರೆ, ನರ್ವಸ್ ವೀಕ್‌ನೆಸ್ ಇದ್ರೆ, ದಾರಿಯಲ್ಲಿ ಕೂತು ಬಿಡಬಹುದೇ ವಿನಃ ಸಾಯಲ್ಲ. ಅದೂ ಅವನ ಮೇಲೆ ಯಾವ ವಾಹನವೂ ಹರಿದಿಲ್ಲ. ಬಿದ್ದದ್ದು ನಿಜ ಅನ್ನೋದಕ್ಕೂ ಅವನ ಮೈಮೇಲೆ ಎಲ್ಲೂ ಗಾಯವಿಲ್ಲ"

"ಹುಂ ಕೊಲೆ ಆಗಿರೋದೇ ನಿಜವಾದ್ರೆ, ಅದನ್ನ ನಾವು ಸಾಬೀತುಪಡಿಸಲು ತೊಗೊಂಡ ಶ್ರಮಕ್ಕೆ, ನಿಮಗಿಂತ ಹೆಚ್ಚಿನ ಪಾಲು ನಮಗೆ ಬರ್ಬೇಕು. ಹತ್ತು ಸಾವಿರ ನಿಮ್ಮದೇ ನಿಮಗೆ ಸಿಕ್ಕರೂ ನಮ್ಮ ಶ್ರಮಕ್ಕೆ ಬೆಲೆ ಸಿಗಬೇಕಲ್ಲ ಸ್ವಲ್ಪವಾದ್ರೂ?" ಸಾಗರ್ ಕೇಳಿದರು.

"ಆದ್ರೆ ಮಗನ್ನ ಕಳ್ಕೊಂಡಿರೋದು ನಾನು, ಹಣ ಕಳ್ಕೊಂಡಿರೋನೂ ನಾನೇ...."

"ಇರ್ಬಹುದು. ಆದ್ರೆ ಕೊಲೆ ಆಗಿಲ್ಲದಿದ್ರೆ? ಕೊಲೆ ಅಂತ ರುಜುವಾತು ಮಾಡೋಕೆ ಆಗಲ್ಲ. ಕಳ್ಳತನ ಆಗಿಲ್ಲದಿದ್ರೂ ದಯಾಕರ ಕದ್ದಿದ್ದಾನೆ ಅನಿಸೋಕೆ ಆಗಲ್ಲ. ಅಕಸ್ಮಾತ್ ಕೊಲೆ ಆಗಿದೆ ಎಂದೇ ಇಟ್ಟುಕೊಳ್ಳಿ, ಆಗಲೂ ಇದೊಂದು ಕ್ರೈಮ್ ಎಗೇನ್ಸ್ಟ್ ಸ್ಟೇಟ್ ಎಂದಾಗಿಬಿಡುವುದರಿಂದ ನಿಮಗೆ 35,000 ರೂ. ಪರಿಹಾರ ಕೊಡಿಸುವ ಪ್ರಶ್ನೆಯೇ ಬರಲ್ಲ. ನೀವು ಕಳೆದು ಕೊಂಡಿರುವ ರೂ. 10,000 ಹಿಂತಿರುಗಿಸಬಹುದಷ್ಟೆ. ಆದ್ರೆ ಕೊಲೆಯೇ ಆಗಿಲ್ಲವೆಂದಾದರೆ ಕಳ್ಳತನವೂ ಆಗಿರಲ್ಲ. ನಿಮ್ಗೆ ಆಗ ಏನೂ ಸಿಕ್ಕೋದೂ ಇಲ್ಲ.

"ಓ ಹಾಗೆಲ್ಲ ಮಾಡ್ಬೇಡಿ ಸಾರ್. ದಯಾಕರ ಕೊಲೆಗಾರನಾದರೆ. ನನಗೆ ಅವರು 35,000 ರೂ. ಏಕೆ ಇನ್ನೂ ಹೆಚ್ಚಿನ ಮೊತ್ತವನ್ನೂ ಕೊಡುವ ಸಾಮರ್ಥ್ಯ ಅವನಿಗಿದೆ. ನನ್ನ ಮಗನ ಬದಲು ಎಟ್ಲೀಸ್ಟ್ ನನಗೆ ಸ್ವಲ್ಪ ಹಣವಾದರೂ ಬೇಡ್ವಾ? ಹೀಗೆ ಮಗನ್ನ, ಸಂಪಾದಿಸುವ ಮಗನ್ನ ಕಳ ಕೊಂಡ್ರೂ, ಬರಿಯ ಅಲೆದಾಟ ಬಿಟ್ಟು ಬೇರೇನೂ ಸಿಗಲ್ಲ ಅನ್ನೋದಾದ್ರೆ ಕೋರ್ಟ್‌ಗ್ಯಾಕೆ ಹೋಗ್ಬೇಕು. ನಾನೂ ನನ್ನ ಯಾರಾದ್ರೂ ವೈರಿಗಳಿದ್ದರೆ ಕೊಲ್ತೀನಿ. ಪರಿಹಾರ ಏನೂ ಕೊಡ್ಬೇಕಾಗಿಲ್ಲ ಅಂದ್ರೆ ಹಾಯಾಗಿ ಜೈಲಿಗೆ ಸೇರ್ತೀನಿ. ಈಗ ನನ್ನ ಮಗನ ಸಾವು ಕೊಲೆಯ ಮೂಲಕ ಎನ್ನುವ ದೃಢೀ ಕರಣ ನನಗೆ ಬೇಕಾಗಿರುವುದು ಪರಿಹಾರ ಧನ ಪಡೆಯುವುದಕ್ಕಾಗಿ. ಕಳ್ಳ ತನವಾದ ಹತ್ತು ಸಾವಿರಕ್ಕೆ ಮಾತ್ರ ಅಲ್ಲ.

"ಈಗಂತೂ ಇದು ಮೊದಲು ಕೊಲೆ ಎಂದು ಸಾಬೀತಾಗಬೇಕು. ಆದ್ರೆ ಮುಂದೆ ನೋಡೋಣ. ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ, ಪರಿಹಾರ ಧನ ಕೊಡಿಸಲು ಬೇಡಿಕೆ ಸಲ್ಲಿಸೋಣ. ಸದ್ಯಕ್ಕೆ ಇದು ಕೊಲೆಯೇ ಎನ್ನುವುದಕ್ಕೆ ಸಾಕ್ಷಿ, ಪುರಾವೆಗಳು ಬೇಕು" ಸಹಾಯಕ ಪೋಲೀಸ್ ಆಫೀಸರ್ ಸಮಾಧಾನಿಸುವ ಧಾಟಿಯಲ್ಲಿ ಹೇಳಿದರು.

"ನೋಡಿ ಸಾರ್, ರಾಘವಪ್ಪ ತಾನು ಕುಳಿತ ಕುರ್ಚಿಯಲ್ಲಿ ಮುಂದೆ ಸರಿದು ಹೇಳಿದ. ದಯಾಕರನಿಗೆ ಸಾಕಷ್ಟು ಹೊಲ, ಮನೆಗಳಿವೆ. ಹಣವೂ ಇದೆ. 35,000ರೂ. ಪರಿಹಾರವನ್ನು 10,000 ರೂ.ಗಳನ್ನೂ ಕೊಡುವ ಸಾಮರ್ಥ್ಯ ಅವನಿಗಿದೆ. ಬೇರೆ ಯಾರಾದರೂ ಆಗಿದ್ದಿದ್ದರೆ ಇಷ್ಟು ಕೊಡಲು

ಅವರಿಗೆ ಸಾಧ್ಯವಾಗುತ್ತಿತ್ತೋ ಇಲ್ಲವೋ? ಇದನ್ನೂ ಗಮನದಲ್ಲಿಟ್ಟುಕೊಂಡೇ ಹೇಳಿದ್ದು ನಾನು. ಇನ್ನು ಅವನಿಗೆ ಬೇರೆ ಯಾವ ರೀತಿಯು ತೊಂದರೆ ಕೊಡಬೇಕು ಅಂತ ನನಗಿಲ್ಲ. ಅಥವಾ...ಇನ್ನೊಂದು ಕೆಲ್ಸ ಮಾಡಿ, ಅವನಿಗೆ ಈ ಕೋರ್ಟಿನ ರಗಳೆ ತಪ್ಪಿಸಿಕೊಳ್ಳಲು ಬರೀ ಐದೋ ಹತ್ತೋ ಸಾವಿರ ನನಗೆ ಕೊಡಲು ಒಪ್ಪಿಸಿಬಿಡಿ. ಹತ್ತು ಸಾವಿರ ಕಳುವಾಗಿದೆ ಅನ್ನೋದು ಮರ್ತುಬಿಡಲು ಪ್ರಯತ್ನಿಸ್ತೀನಿ. ನಂಗೂ ಕೋರ್ಟಿಗೆ ಹೋಗೋದು ಅಂದ್ರೆ ಬೇಜಾರೇ. ನಿನ್ನೆ ನನ್ನ ದುಃಖದಲ್ಲಿ, ಆ ಸಿಟ್ಟಿನಲ್ಲಿ ಏನೇನೋ ಹೇಳ್ದೆ ಅಷ್ಟೆ."

"ಹತ್ತು ಸಾವಿರ ರೂ. ಕಳುವಾದಾಗ ಬರೀ ಐದು ಸಾವಿರ ಕೊಡ್ತೀನಂತ ಯಾರು ಹೇಳ್ತಾರೆ ಮಿಸ್ಟರ್. ನೀವು ಸುಳ್ಳು ಹೇಳ್ತಾ ಇದೀರಾ ಎಲ್ಲ."

"ಛೆ, ಛೆ ನಾನ್ಯಾಕೆ ಸುಳ್ಳು ಹೇಳಲಿ. ಆದರೆ ಇದು ಕೊಲೆ ಮತ್ತು ಕಳ್ಳತನವೇ ಆಗಿದೆ ಅಂತ ಪ್ರಮಾಣೀಕರಿಸಲು ನನ್ನ ಹತ್ತಿರ ಸರಿಯಾದ ದಾಖಲೆಗಳೇ ಇಲ್ಲವಲ್ಲ. ಅದಕ್ಕೇ ಹೇಳಿದೆ ಅಷ್ಟೆ."

"ಹೋಗಲಿ ಬಿಡು ಎಂದು ಐದು ಸಾವಿರವಾದರೆ ಐದು ಸಾವಿರ. ಅಷ್ಟು ಪಡೆದು ಕೈಬಿಡಲಾ ಎಂದು ರಾಘವಪ್ಪ ಮಾತುಗಳನ್ನು ಹಾಗೂ ಹೊರಳಾಡಿಸಿ ಹೇಳಿ, ಮತ್ತೆ ಮಾತು ಮುಂದುವರಿಸಿದ.

"ಈಗ ನಾನೇನು ಇಷ್ಟಕ್ಕೇ ಬಿಡಲ್ಲ ಬಿಡಿ. ಸುಮ್ನೆ ನನ್ನ ತಲೆಯಲ್ಲಿ ಒಂದು ಕ್ಷಣ ಸುಳಿದ ಯೋಚನೆಯನ್ನ ನಿಮ್ಮ ಮುಂದಿಟ್ಟೆ ಅಷ್ಟೆ." ಎಂದ. ಮರುಕ್ಷಣ ಧ್ವನಿ ಬದಲಿಸಿ, ಸಾರ್ ಹೇಗಾದ್ರೂ ಈ ಕೇಸ್‌ನ ನನ್ನ ಪರ ವಾಗಿಸಿ ಕೊಡಿ, ನೀವು ಕೇಳಿದ್ದು ಕೊಡ್ತೀನಿ. ಬರೀ ಸಾಕ್ಷಿಗಳನ್ನಂತೂ ಒದ ಗಿಸ್ತೀನಿ. ಇದೊಂದು ಸಹಾಯ ಮಾಡಿಬಿಡಿ ಸಾರ್" ಎಂದ.

ಪೋಲೀಸ್ ಇಲಾಖೆಯ ಸಿಬ್ಬಂದಿಯವರು ಮುಖದಲ್ಲಿ ನಗೆ ತೇಲಿಸಿ ಮಾತು ಬಿಗಿಗೊಳಿಸಿದರು. "ಅಂದ್ರೆ ನೀವು ಹೇಳೋದು ಅಕಸ್ಮಾತ್ ದಯಾಕರ ಕೊಲೆ ಮಾಡಿಲ್ಲದಿದ್ರೂ ಮಾಡಿದ್ದಾನೆ ಅನ್ನಿಸಬೇಕು ಅಂತ, ಅಲ್ವೇ?" ಎಸ್. ಓ. ಕೇಳಿದರು. "ಹಾಗೆ ಅನ್ನಿಸಬೇಕಾದ್ರೆ ಎಷ್ಟು ಜನರಿಗೆ ಸಿಹಿ ತಿನ್ನಿಸಬೇಕಾಗುತ್ತೆ ಗೊತ್ತಾ? ಮೊದಲು ವೈದ್ಯರಿಗೆ. ಆಮೇಲೆ ನಮ್ಮ

ಪಿ.ಐ.ಗೆ, ಕೋರ್ಟಿನ ಗುಮಾಸ್ತರಿಗೆ, ನಾವು ಹುಟ್ಟಿಸುವ ಸಾಕ್ಷಿಗಳಿಗೆ, ನಮ್ಮ ಮಾತು ಆಲಿಸುತ್ತಾ ಆ ಬಾಗಿಲ ಹಿಂದೆ ನಿಂತು, ಅರ್ಧಮರ್ಧ ಅರ್ಥಮಾಡಿ ಕೊಳ್ಳುವ ನಮ್ಮ ಪೇದೆಗಳಿಗೆ, ಇನ್ನೂ......ಇನ್ನೂ ಎಷ್ಟು ಜನರ ಮನ ವೊಲಿಸಬೇಕಾಗಿ ಬರುತ್ತೋ, ನೀವೇ ನೋಡ್ಕೊಳ್ಳಿ. ನಿಮ್ಮ ಹತ್ತುಸಾವಿರ ರೂ. ಕಳುವಾದದ್ದು ವಾಪಸ್ ಸಿಕ್ಕರೂ ಸರಿ, ಕೋರ್ಟು ಕಟಕಟೆ ಬೇಡಾಂತ ಆ ದಯಾಕರ ಹತ್ತು ಸಾವಿರ ಕೊಟ್ಟರೂ ಸರಿ ಫಿಫ್ಟಿ ಫಿಫ್ಟಿ ಶೇರ್ ಆಗ್ಬೇಕು ಸರಿನಾ?"

"ನಿಮ್ಗೇನು ಯಾರ್ಗ್ಗೆ ಕೊಡ್ಬೇಕಾಗಿದೆ ರಿ?" ಅವರ ಮಾತನ್ನು ಅನು ಮೋದಿಸುವಂತೆ ಆರಂಭಿಸಿದ ಶೇಖರ್. ಜಾರ್ಜ್ ಮತ್ತು ಯಾರಾದ್ರೂ ಇನ್ನೊಂದಿಬ್ರಿಗೆ ತಾನೇ? ಶವ ಸಂಸ್ಕಾರಕ್ಕೆ ರೂ. ಒಂದು ಸಾವಿರ ಅಂತ ಇಟ್ಕೊಳ್ಳಿ. ಉಳಿದದ್ದೆಲ್ಲ ನಿಮಗೇ ತಾನೇ?"

ಎಸ್. ಪಿ. ಹಾಗೂ ಪಿ. ಐ. ಈಗ ನಿರ್ಭೀತಿಯಿಂದ, ನಿಶ್ಚಿತವಾಗಿ ಮಾತಾಡಿ, ರಾಘವಪ್ಪ ಮುರ್ಕಿನಮನಿಯೊಡನೆಯು ತಮ್ಮ ವ್ಯಾಪಾರಕ್ಕೆ ಸಿಕ್ಕ ಹಣದಲ್ಲಿ ಶೇಕಡಾ 50 ಶೇರ್‌ಗೆ ರಾಘವಪ್ಪನ ಮಾತಿನ ಸಹಿ ಹಾಕಿಸಿ ಕೊಂಡರು. ಆ ನಂತರ ತಮ್ಮ ಕರ್ತವ್ಯ ನೆನಪಿಸಿಕೊಂಡು ತಮ್ಮ ಪ್ರಶ್ನಾವಳಿ ಮುಂದುವರಿಸಿದರು.

"ಹ್ಞಾ ಅಂದ್ಹಾಗೆ......" ಎಸ್. ಪಿ. ಗಂಟಲು ಸರಿಪಡಿಸಿಕೊಂಡು ಪೊಲೀಸ್ ಧಾಟಿಯಲ್ಲಿ ಕೇಳಿದರು.

"ನಿಮ್ಮ ಮಗ ಏನು ಓದುತ್ತಿದ್ದ? ಅವನಿಗೆ ಸ್ನೇಹಿತರೆಷ್ಟು? ಯಾರ್ಯಾರು ಅಂತ ವಿವರ ಕೊಡಿ."

"ಅವನು ಓದುತ್ತಿರಲಿಲ್ಲಾ ಎಂದೆನಲ್ಲ ಸ್ವಾಮಿ, ಓದು ಹತ್ತಲಿಲ್ಲ. ಅವನಿಗೆ ಸ್ನೇಹಿತರೇ ಇರಲಿಲ್ಲ. ತುಂಬಾ ಒಂಟಿಯಾಗಿ ಇರುವ ಸ್ವಭಾವ ಅವನದು. ನಾವೇ ಈ ಮನೆಗೆ ಬಂದು 10 ತಿಂಗಳಾಯಿತಷ್ಟೆ. ನಮಗೇ ಇನ್ನೂ ಯಾರದೂ ಪರಿಚಯವಾಗಿಲ್ಲ. ಅವನಿಗೆ ಯಾರ ಗೆಳೆತನ?

"ನಿಮ್ಮ ವ್ಯಾಪಾರ ಏನು? ಸುರೇಶ್ ನಿಮ್ಮ ಜೊತೆ ಯಾಕೆ ಇರಲಿಲ್ಲ" ಇತ್ಯಾದಿ ಮಾತುಗಳು, ಪ್ರಶ್ನೋತ್ತರಗಳು ಎಷ್ಟೋ ಹೊತ್ತು ನಡೆಯಿತು.

ರಾಘವಪ್ಪನ ಮಗಳು ಅಂದವಾದ ಡ್ರೆಸ್ ಮಾಡಿಕೊಂಡು, ಎಲ್ಲರಿಗೂ ಎರಡೆರಡು ಮಸಾಲೆ ದೋಸೆ ತಂದು ಕೊಟ್ಟಳು. ಅವರ ಪ್ರಶ್ನೆಗಳ ಮಧ್ಯೆ ತಾನೂ ಬಾಯಿ ಸೇರಿಸಿ, ಮೋಹಕವಾಗಿ ನಕ್ಕು ಉತ್ತರ ಕೊಟ್ಟಳು. ಬೇಡ ಬೇಡವೆಂದರೂ ಬಂದವರಿಗೆ ಉಪಚರಿಸಿ, ಇನ್ನೊಂದು ಮಸಾಲೆ ದೋಸೆ ಹಾಕಿ ಪಿ. ಐ. ಶೇಖರ್‌ರವರನ್ನು ನೋಡಿ ಆತ್ಮೀಯವಾಗಿ ನಕ್ಕಳು. ಹೊರಡುವಾಗ ರಾಘವಪ್ಪ ಮತ್ತೊಮ್ಮೆ ನಮಸ್ಕರಿಸಿ ಬೇಡಿಕೊಂಡ. "ಹೇಗಾದ್ರೂ ಮಾಡಿ, ಈ ಕೇಸ್ ತೀರ್ಮಾನ ಮಾಡಿಸಿ ನಮ್ಮ ಹಣ ನಮಗೆ ದೊರಕಿಸಿ ಕೊಡಿ ಇನ್ಸ್‌ಪೆಕ್ಟರೇ, ನಿಮಗೆ ಬೇಕಾದ್ರೆ ಕೇಳಿದ್ದು ಕೊಡ್ತೀನಿ. ನಂಗೆ ಹಣದಾಸೆ ಇಲ್ಲ. ಅದ್ರೆ ನನ್ನ ಮಗನನ್ನು ಕೊಂದ ಪಾಪಿಗೆ ಸರಿಯಾದ ಶಿಕ್ಷೆ, ಆಗ್ಬೇಕು ಅಷ್ಟೇ ಎಂದ. ತಾನು ಮೊದಲು ವ್ಯಾಪಾರ ಮಾಡಿದ್ದನ್ನು ಮರೆತು.

"ಆಯ್ತು. ಆಯ್ತು. ನಾವಿರುವಾಗ ಯಾಕೆ ಯೋಚನೆ. ನಿಜ ಕಂಡು ಹಿಡೀತೀನಿ. ಯು ನೀಡ್ ನಾಟ್ ವರ್ರಿ" ಎಂದು ರಾಘವಪ್ಪನ ಬೆನ್ನು ತಟ್ಟಿ, ಅವನ ಪಕ್ಕದಲ್ಲೇ ನಿಂತು ನಮಸ್ಕರಿಸಿದ ಚೆಲುವೆ. ರಾಣಿಯ ಕಡೆ ಗೊಮ್ಮೆ ನೋಡಿ ತಲೆ ಆಡಿಸಿ ಮೆಟ್ಟಿಲಿಳಿದರು ಇಬ್ಬರೂ, ಪೋಲೀಸ್ ಅಧಿಕಾರಿಗಳು.

ಆ ದಿನ ಮನೆಗೆ ಹೋಗುವಾಗ ಇನ್ಸ್‌ಪೆಕ್ಟರ್ ಶೇಖರ್‌ರವರ ತಲೆ ತುಂಬ, ರಾಣಿಯ ರೂಪಗಳದೇ ಹಾವಳಿ ; "ಎಂಥ ಚೆಲುವಿನ ರಾಶಿ ಆ ರಾಣಿದು. ಪಾಪ ಒಡಹುಟ್ಟಿದ ಸುರೇಶನನ್ನು ಕಳೆದುಕೊಂಡದ್ದಕ್ಕೆ ಮುಖ ಕಳೆಗುಂದಿದೆ. ಇದು ಕೊಲೆ ಆಗಿರಲಿ, ಆಗಿಲ್ಲದಿರಲಿ, ಆ ತರುಣಿಯ ಒಡ ಹುಟ್ಟಿದ ಸೋದರನಂತೂ ಇಲ್ಲವಲ್ಲ ಇನ್ನು ? ಪಾಪ ಅಂಥ ದುಃಖದಲ್ಲೂ ಅವಳ ಆ ಆತ್ಮೀಯ ನಗು, ಮುದ್ದಾದ ಮಾತು ಎಷ್ಟು ಆಕರ್ಷಕ, ಹಾಗೆ ನೋಡಿದರೆ ಗಂಡಸರು ಆಕರ್ಷಿತರಾಗುವುದು ಹೆಂಗಸರ ಒನಪು ವೈಯ್ಯಾರಗಳಿಗೇ ವಿನಃ ಸೌಂದರ್ಯಕ್ಕಲ್ಲ. ಹುಡುಗಿಯರು ಎಷ್ಟೇ ಚೆನ್ನಾಗಿರಲಿ. ತೀರ ಗಂಭೀರವಾಗಿದ್ದರೆ, ಯಾರೂ ಅವರನ್ನೂ ಮಾತಾಡಿಸಲೇ ಹೋಗುವುದಿಲ್ಲವೋ ಏನೋ, ರಾಣಿಯಲ್ಲಿ, ಈ ವೈಯ್ಯಾರವಿದೆ. ಮುದ್ದಾಗಿ ಮಾತಾ

ಡುವ. ಜಾಣ್ಮನವಿದೆ. ಇವಕ್ಕೆಲ್ಲ ಹೊಳಪು ನೀಡುವ ಅಂದವೂ ಇದೆ. ಆ ರಾಘವಪ್ಪನ ಸೌಂದರ್ಯವೂ ಅಷ್ಟೇ ಎಂಥವರಾದರೂ ಗೌರವ ಕೊಡಬೇಕು, ಹಾಗಿದೆ ಅವನ ವ್ಯಕ್ತಿತ್ವ, ಸೌಂದರ್ಯವೊಂದಿದ್ದರೆ, ಯಾರಿಂದ ಏನು ಬೇಕಾದರೂ ಮಾಡಿಸಿಕೊಳ್ಳಬಹುದೇನೋ ? ಮಾಡಿಸಿಕೊಳ್ಳುವ ಗುಣ, ಚಾತುರ್ಯ ಇರಬೇಕಷ್ಟೆ. ರಾಘವಪ್ಪ ಮುರುಕಿನ ಮನಿಯೂ ಅನುಕೂಲ ವಾಗಿಯೇ ಇದ್ದಾರೆನಿಸುತ್ತದೆ. ಇಂಥವರು ಸುಳ್ಳೇಕೆ ಹೇಳುತ್ತಾರೆ ? ದಯಾಕರ ನಿಜವಾಗಲೂ 10,000ರೂ. ಹಾರಿಸಿರಬಹುದು.

ಹುಹ್, ಆ ಕಪ್ಪು ಬಣ್ಣದ ಕುಳ್ಳ ದಯಾಕರ, ಅದಕ್ಕೆ ತಕ್ಕ ಆ ಕರಿ ಹೆಂಡತಿ, ಅವುಗಳಿಗೆ ಹೊಂದುವ ಆ ಅವಲಕ್ಷಣ ಮುಖದ ತಂದೆ ತಾಯಿ, ನೋಡಲೇ ಬೇಸರ ಎನಿಸುವುದಲ್ಲದೇ ಅವುಗಳ ಆ ನಿಲುವು, ಕಳೆ, ಗಂಭೀರ ಟೀಕೆ. ಮರ್ಯಾದೆ ಕೊಡದ ನಡವಳಿಕೆ. ಹುಂ ತಾವೇ ಕಾನೂನಿನ ಗಗನದಲ್ಲಿ ಮಿಂಚುವ ಗೆರೆಗಳೇನೋ ಎನ್ನುವಂಥ ಆ ಧಿಮಾಕು ಬೇರೆ ಎಲ್ಲ ಅಡಗಿಸ ಬೇಕು. ದಯಾಕರ, ಸತ್ಯ ಬಯಲಿಗೆಳೆಯುತ್ತೇನೆ, ಎಂದು ಪಣತೊಟ್ಟರೆ, ಏನೂ ತಿಳಿಯದ ಅವನ ಗಿಡ್ಡ ತಂದೆ, ತನಗೇ ತಾನೊಂದು ಹೇಳಿ ಕೊಡಲು ಬಂದಿದ್ದಾನೆ. ಏನೋ ಮಗನಿಗೆ ಡಿಗ್ರಿ ಮಾಡಿಸಿ ಬಿಟ್ಟಿದ್ದೇನೆ ಎಂಬ ಜಂಭ ಅವನಿಗೆ, ಹಳ್ಳಿಯಲ್ಲಿದ್ದ ಬೆಪ್ಪು ಮಗನಿಗೆ. ಡಿಗ್ರಿ ಪಡೆದು, ಬ್ಯಾಂಕ್‌ನ ಕೆಲಸದಲ್ಲಿದ್ದೇನೆ ಎನ್ನುವುದೇ ಒಂದು ಕೊಬ್ಬು. ನಿಜ ಏನೇ ಇರ್ಲಿ, ಈ ಕುಳ್ಳ ರಿಗೆ ಹೇಗಾದರೂ ಕೊಂಚ ಚುರುಕು ಮುಟ್ಟಿಸಿ ಕೊಬ್ಬಿಳಿಸಬೇಕು. ಇಲ್ಲದಿದ್ರೆ ತಾನು ಪೋಲೀಸ್ ಅಧಿಕಾರಿಯಾಗಿ ಏನು ಬೆಲೆ ಸಿಗುತ್ತೆ? ತಾನೇನು ತನ್ನ ಹುದ್ದೆ ಯೇನು ? ತನ್ನ ಅಧಿಕಾರವೇನು ? ಅದನ್ನು ತಿಳಿದುಕೊಳ್ಳಲಿಲ್ಲವಲ್ಲ ಅವರು? ತಮಗೆ ಮರ್ಯಾದೆ ಕೊಡಲಿಲ್ಲವಲ್ಲ ಎನ್ನುವ ಒಂದೇ ಕಾರಣಕ್ಕೆ ದಯಾಕರನ ಸಂಸಾರವೇ ಕುರೂಪು, ಪೆದ್ದು. ಎಂದೆಲ್ಲ ಬೈದು ತಮ್ಮ ಮನಸ್ಸಿಗೆ ಸಮಾಧಾನ ತಂದುಕೊಂಡರು ಇನ್ಸ್‌ಪೆಕ್ಟರ್ ಶೇಖರ್‌ರವರು,

ಹುಟ್ಟಿ 39 ವರ್ಷವಾದರೂ ಇನ್ನೂ ಅವಿವಾಹಿತರಾಗಿಯೇ ಉಳಿದ ಪೋಲೀಸ್ ಅಧಿಕಾರಿ ಶೇಖರ್‌ರವರ ಯೋಚನೆಗಳು ಮನೆ ತಲುಪಿದ ಮೇಲೂ ಅವರ ಏಕಾಂತಕ್ಕೆ ಜೊತೆ ಕೊಟ್ಟವು "ನ್ಯಾಯಾಧೀಶ ದಯಾಳು

ವವಾಗೆ ತನ್ನ ಬಗ್ಗೆ ಗೌರವವಿದೆ". ಆರಾಮಾಸನದ ಮೇಲೆ ಕಾಲು ಚಾಚಿ ಕುಳಿತರು ಅವರು. "ಇನ್ನು ಆ ಪಬ್ಲಿಕ್ ಪ್ರಾಸಿಕ್ಯೂಟರ್ ಅನುಭವಿ. ತಾನು ಹೇಳಿದ್ದಕ್ಕೆ ಸದಾ ಶಾಮೀಲು ಇಂಥ ಕೇಸ್‌ಗಳು ಸಿಗುವುದೇ ಅಪರೂಪ ಕೇಳುವ ಮೊದಲೇ ರಾಘವಪ್ಪ ಹಣ ಕೊಡುವ ಸೂಚನೆ ಕೊಟ್ಟಿದ್ದಾರೆ. ಪಾಲು ಸಿಗುವುದಾದರೆ ಪಬ್ಲಿಕ್ ಪ್ರಾಸಿಕ್ಯೂಟರೂ ತಲೆ ಆಡಿಸಬಹುದು. ನಂಬಿಸಬೇಕು, ತಲೆ ಆಡಿಸುವಂತೆ ಮಾಡಬೇಕು.

ನ್ಯಾಯಾಧೀಶ ದಯಾಳುವರ್ಮಾಗೆ, ಅವರ ಮಗಳನ್ನು ಫಾರಿನ್‌ಗೆ ಹೊರಟಿರುವ ತನ್ನ ತಮ್ಮನಿಗೆ ಕೊಟ್ಟು ಮದುವೆ ಮಾಡುವ ಇಚ್ಛೆ ತನಗೆ ಕೊಡಲು ಅವರಿಗೆ ಇಷ್ಟವಿಲ್ಲ. ಪೋಲೀಸ್ ಅಧಿಕಾರಿ ಎಂದರೆ ಜೀವನದ ನೆಮ್ಮದಿ ಹೀರುವ ಬದುಕು ಎಂದೋ ಏನೋ ಆವರ ಮಗಳ ಅಭಿಪ್ರಾಯ. ತಾನು ವಯಸ್ಸಿನ ಮೆಟ್ಟಿಲುಗಳನ್ನು ಇಳಿಯುತ್ತಿರುವವ ಎನ್ನುವುದೂ ಇನ್ನೊಂದು ಸಬೂಬು. ಆದರೆ ಹಣವಂತ ನ್ಯಾಯಾಧೀಶರ ಅಂದವಿಲ್ಲದ ಮಗಳನ್ನು ತನ್ನ ತಮ್ಮನಿಗೆ, ಮದುವೆ ಮಾಡಿಸಲು ತನ್ನ ತಮ್ಮ ಒಪ್ಪ ಬೇಡವೇ ? ತಾನೇ ಮೆಚ್ಚಿಲ್ಲ ಆ ಹುಡುಗಿಯನ್ನು, ತಮ್ಮ ಒಪ್ಪಬಹುದೇ ? ಅವನ ಓದೂ ಪೂರ್ತಿಯಾಗಬೇಕಲ್ಲ ಮೊದಲು ? ಈಗಂತೂ ಅವನ ಫಾರಿನ್ ವಿದ್ಯಾಭ್ಯಾಸದ ಖರ್ಚಿಗೆ. ಪರದೇಶ ಪ್ರಯಾಣಕ್ಕೆ, ಈ ಕೇಸಿನಲ್ಲಿ ರಾಘವಪ್ಪ ಮುರುಕಿನ, ಮನಿ ತಿಳಿಸಿದಂತೆ ಶೇಕಡ ಇಪ್ಪತ್ತರಲ್ಲಿ ಹತ್ತೋ ಹದಿನೈದು ಪ್ರಶಿಶತವಾದರೂ ತನ್ನ ಪಾಲಿಗೆ ಬಂದರೆ, ಎಷ್ಟೋ ಅನುಕೂಲವಾಗುತ್ತೆ. ದುಡ್ಡು ಯಾರಿಗೆ ಬೇಡ? ಕೊಡುವವರು ಸಿಗಬೇಕಷ್ಟೆ ಹಣ ಸಿಗುತ್ತ ಹೋದಂತೆಲ್ಲ ಮನುಷ್ಯನ ಆಸೆಗಳೂ ಹೆಚ್ಚುತ್ತ ಹೋಗುತ್ತವೆ. ಸಿಕ್ಕ ಹಣವನ್ನು ಉಪಯೋಗಿಸುವ ದಾರಿ ತೋರಲು ಇಪ್ಪತ್ನಾರು ಬಾಗಿಲುಗಳು ತೆರೆದು ನಿಲ್ಲುತ್ತವೆ. ಅಥವಾ ಖರ್ಚಿನ ದ್ವಾರಗಳು ಸುತ್ತ ತೆರೆದು ನಿಂತಾಗ, ಮನುಷ್ಯ ಅದಕ್ಕಾಗಿ ಹಣ ಸಂಪಾದಿಸುವಂಥಹ ದಾರಿಗಳನ್ನು ಹುಡುಕುತ್ತಾನೋ ಏನೋ ಹಣಕ್ಕೂ ಹೆಣ್ಣಿಗೂ ಎರಡಕ್ಕೂ ಒಂದೇ ದಾರಿ ಇದೆ ಈಗ. ತಾನು ಮದುವೆಯನ್ನು ಸದ್ಯಕ್ಕೆ ಬೇಡ ಎನ್ನುತ್ತಿದ್ದುದೇ. ಇಷ್ಟು ದಿನ ತನಗೆ ಯಾರೂ ಇಂಥ ಸುಂದರಿಯರು ಅಲ್ಲಲ್ಲ ವೈಯ್ಯಾರಿಯರು

ಸಿಕ್ಕಲಿಲ್ಲ ಎನ್ನುವ ಕಾರಣಕ್ಕಾಗಿಯೋ ಏನೋ, ಎಂದು ಪಿ. ಐ. ಗೆ ಈಗ ಮನದಟ್ಟಾಯಿತು. ರಾಣಿಯನ್ನೇ ಮದುವೆಯಾಗಿಬಿಡಬಹುದು ತಾನು. ಅಬ್ಬ ಎಷ್ಟು ಚಂದದ ಬೆಡಗಿ ;" ಬ್ರಹ್ಮಚಾರಿಯ ತಲೆಯಲ್ಲಿ ಈ ಏನೇನೋ ಅನಿಸಿಕೆಗಳು ಕುಲಕಾಡಿ ಖುಷಿ ಕೊಡುವುದರ ಜೊತೆಗೆ ಮೈಯೊಳಗಿನಿಂದೆದ್ದ ಪುಳಕ ಅವರ ಮನಸ್ಸಿಗೆ ಜೋಕಾಲೆಯಾಡಿಸಿ. ದಯಾಕರನನ್ನು ಕೊಲೆಗಾರ ಎಂದು ಸಾಬೀತು ಪಡಿಸಿದರೆ ಲಾಭದಾಯಕ, ಹಾಗೇ ಮಾಡಬೇಕು ಎಂಬ ನಿರ್ಧಾರಕ್ಕೆ ಬರುವಂತೆ ಮಾಡಿತು.

ಮರುದಿನ, ಈ ಕೇಸ್ ಬಗ್ಗೆ ತಾನು ವಿಚಾರಣೆ ಮಾಡಿ ಬರೆದುಕೊಂಡ ಡೈರಿಯ ಕಾಪಿಯನ್ನು, ಜೊತೆಗೆ ದಯಾಕರನನ್ನೂ, ಅಲ್ಲಿಯ ಜ್ಯುಡಿಷಿಯಲ್ ನ್ಯಾಯಾಧೀಶರ ಸಮ್ಮುಖದಲ್ಲಿ ನಿಲ್ಲಿಸಿದರು ಪಿ. ಐ.ರವರು, ಅಲ್ಲಿ ಮತ್ತೊಮ್ಮೆ ಸಾವಿರ ಸುಳ್ಳು ಮತ್ತು ನಿಜದ ಪ್ರಶ್ನೆಗಳು ದಯಾಕರನ ತಾಳ್ಮೆಯ ಮೇಲೆ ಡಮರುಗ ಬಾರಿಸಿದುವು. ನಿಜಕ್ಕೆ ಕೋಪ ಹೆಚ್ಚೀ ಯಾವಾಗಲೂ. ಆದರಲ್ಲೂ ನವವಿವಾಹಿತ ತರುಣ, ತಾನೇ ಮಾರಿಯನ್ನು ಮನೆಗೆ ಕರೆದು ಔತಣ ಹಾಕಿ, ಆಮೇಲೆ ಪೇಚಾಡತೊಡಗಿದ ಅಸಮಾಧಾನಿ. ಕೋಪದಲ್ಲಿ ಏನೇನು ಉತ್ತರ ಕೊಟ್ಟನೋ, ಯಾವುದಕ್ಕೆ ಉತ್ತರವೇ ಕೊಡದೇ ನಿಂತುಬಿಟ್ಟನೋ, "ಬಿಟ್ಟುಬಿಟ್ರೆ ನನ್ನ ಹೆಂಡತಿಯನ್ನೂ ಹಾರಿಸಿ ಕೊಂಡು ಕಾಶ್ಮೀರಕ್ಕೆ ಹೋದರೆ ನಿಮ್ಮ ಕಣ್ಣಿಗೂ ಬೀಳುವುದಿಲ್ಲ. ಹಾಳಾಗಿ ಹೋಗ್ಲಿ ನಿಮ್ಮ ಕೊಲೆಯ ಪ್ರಕರಣ, ನನ್ನ ಕೆಲಸ. ಯಾರಲ್ಲಿದೆ ನ್ಯಾಯ" ಎಂದೆಲ್ಲ ಕೂಗಿಬಿಟ್ಟನೋ, ಇಲ್ಲಾ 24 ಘಂಟೆಗಳೊಳಗೆ ಇನ್‌ವೆಸ್ಟಿಗೇಷನ್ ಮುಗಿಸಲಾಗದ ಪ್ರಕರಣ ಎನಿಸುವಂತೆ ಮಾಡಿದನೋ ಅಂತೂ ಆರೆಸ್ಟ್ ಮಾಡಿದ ಆರ್ಡರ್‌ನ ನಕಲು. ಬರವಣಿಗೆಯಲ್ಲಿ ಕೈಗೆ ಬಂದುದೇ ಅಲ್ಲದೇ, ಪುನಃ 14 ದಿನಗಳು ಜ್ಯುಡಿಷಿಯಲ್ ಕಸ್ಟಡಿಯಲ್ಲಿ ವಾಸ ಮುಂದುವರಿಸುವ ಆದೇಶ, ಸಕಾರಣಗಳೊಂದಿಗೆ ಆವನ ಕೈ ಸೇರಿತು. ಆ ಆದೇಶಕ್ಕೆ ದಯಾಕರನ ಸಹಿಯೂ ಹಾಕಿಸಲಾಯಿತು. ಸೆರೆವಾಸ ಮುಂದುವರಿಸಿದು ದಕ್ಕೆ ಕಾರಣ ಓದಿ ತಿಳಿಯುವ ತಾಳ್ಮೆ ಮಾತ್ರ ದಯಾಕರನಿಗೆ ಇರಲಿಲ್ಲ.

ದಯಾಕರನಿಗೆ ಸೆರೆವಾಸ ಮುಂದುವರಿಸಿದ ವಿಷಯ ಕೇಳಿದಾಗ ಅವನ

ಸಂಸಾರದವರಿಗೆಲ್ಲ, ಭೂಮಿಯೇ ಬುಡಮೇಲಾಗಿ ತಲೆಯ ಮೇಲೆ ಬಿದ್ದಂತ ಭಾವ. ಆರಾಮವಾಗಿ ಬದುಕು ನಡೆಸಿಕೊಂಡಿದ್ದವರ ಬಾಳಿನಲ್ಲಿ ಇದೆಂಥ ಚಂಡಮಾರುತ ? ಯಾವುದೋ ರೋಗಿಯೊಬ್ಬನಿಂದ ಮೇಲೆದ್ದು ಬಂದ ಗಾಳಿ, ಬಿರುಗಾಳಿಯಾಗಿ ತಿರುಗಿ ತಮ್ಮ ಮನೆಯನ್ನೇ ಉರುಳಿಸ ಹೊರಟಿದೆಯೇ ಎಂಬ ಭಯ. ಮನೆಯಲ್ಲಿ ಚೆನ್ನಾಗಿ ಉಂಡು, ತಿರುಗಾಡಿಕೊಂಡಿದ್ದ ಭೋಳ್ಯಾ ದಯಾಕರನಿಗೆ ಪೋಲೀಸರ ಕೈಯ್ಯಡಿಯಲ್ಲಿ ಎಂಥ ಊಟ ಸಿಕ್ಕೀತು ? ಅವನಿಗೆ ಈ ಆರೋಪದಿಂದ ಬಿಡುಗಡೆ ಹೇಗೆ" ? ಎನ್ನುವ 100 ಯೋಚನೆಗಳೂ, 100 ರೀತಿಯಲ್ಲಿ, ಎಲ್ಲರ ಮನದೊಳಗೆ ತೊಯ್ದಾಡಿದವು. ತಾಯಿಯ ಮನಸ್ಸಿನಲ್ಲಿ ಹುಟ್ಟಿದ ಭಯದ ಭಾವನೆಗಳು ಅವರ ರಕ್ತವನ್ನು ಒತ್ತರಿಸಿ ಉಬ್ಬಿಸಿದವು. ತಲೆನೋವು, ಜ್ವರ ಮತ್ತು ಎದೆ ನೋವಿನಿಂದ ಮೊದಲೇ ನರಳುತ್ತಿದ್ದ ತಾಯಿ. ಈಗ ಪೂರ್ತಿ ಹಾಸಿಗೆ ಹಿಡಿದು, ಸುಮಾಳನ್ನು ಮನೆಯಿಂದ ಎಲ್ಲೂ ಕದಲಗೊಡಲಿಲ್ಲ. ಹೊರಗೆಲ್ಲೂ ಹೋಗಲಾಗದೇ, ಅತ್ತೆಯ ಸೇವ ಶುಶ್ರೂಷೆಯನ್ನು ಮೌನವಾಗಿ ಮಾಡ ತೊಡಗಿದ ಸುಮಾಳ ಮೇಲೆ ಮೌನವಾಗಿದ್ದರೂ, ಮನದ ಒಳಗೆ ಉಪಾಯಗಳು ತಾಕಲಾಡತೊಡಗಿದ್ದವು. ಜಾಮೀನಿಗಾಗಿ ಓಡಾಡುತ್ತಿದ್ದ ವಸಂತ ರಾವ್‌ಗೆ, ಮೊದಲು ಆ ರತ್ನಾ ಟೈರ ಮಾಲೀಕನನ್ನು" ಹುಡುಕಿಕೊಂಡು ಬರೋಣ ಎಂದು ಸೂಚಿಸಿದವಳು ಅವಳೇ, 3ನೇ ದಿನ ವಕೀಲ ರಾಜಾ ರಾಯರು, ಈ ಪ್ರಕರಣದ ಬಗ್ಗೆ ಕೂಲಂಕುಷ ವಿವರಣೆಯನ್ನು ಪಡೆಯಲೆಂದು ಮನೆಗೆ ಬಂದಾಗ, ಸಂಪೂರ್ಣ ಘಟನೆಯ ವರದಿ ಒಪ್ಪಿಸಿದ ಸುಮಾ ಒತ್ತು ಕೊಟ್ಟಿದ್ದು ತಮ್ಮ ಜೊತೆಗೆ ಬಂದ ಮುದುಕಪ್ಪನನ್ನು ಕಂಡರೆ ಸತ್ಯಕ್ಕೆ ಸಾಕ್ಷಿ ಸಿಗಬಹುದೆನ್ನುವ ವಿಷಯದ ಬಗೆಗೇ. ಆದರೆ ಅವಳ ಮಾತು ಕೇಳಿಸಿಕೊಂಡರೂ ಕಾರ್ಯರೂಪಕ್ಕಿಳಿಯಲು ರಾಜಾರಾಯರಿಗೆ ಪುರುಸೊತ್ತು ಇರಲಿಲ್ಲ. ದಯಾಕರನನ್ನು ಬಿಡಿಸಿ ಕರೆ ತರಲು ಮಾತ್ರ ಆಲೋಚನೆ ಮಾಡ ತೊಡಗಿದ್ದರು ಅವರು. ಇನ್ನೊಂದು ಯಾವುದೋ ಪ್ರಕರಣದಲ್ಲಿ ಬಹಳ ತರಾತುರಿಯಿಂದ ಓಡಾಡಬೇಕಾಗಿ ಬಂದುದರಿಂದಲೂ, ಅದರ ತೀರ್ಪಿಗಾಗಿ ಯಾರು ಯಾರನ್ನೋ ಪತ್ತೆ ಹಚ್ಚಬೇಕಾದುದರಿಂದಲೂ ಅವರಿಗೆ ವಸಂತ ರಾಯರ ಮನೆ ಕಡೆ ಮತ್ತೆ ಐದು ದಿನ ಬರಲಾಗಲಿಲ್ಲ ಅಲ್ಲದೇ ಅವರೆಷರ

ಕೆಲಸಕ್ಕೆ ಅವರವರಿಗಷ್ಟೇ ಆತುರ ಬೇರೆಯುವರಿಗೇನು ? ದಯಾಕರನ ಮನೆಯುವರಿಗೆ ಬಿಡುಗಡೆಯು ಆತುರ. ಅವರ ವಕೀಲರಿಗೆ ತಮ್ಮ ಕೈ ಸೇರಬೇಕಾದ ಹಣ ಜಾರದಂತೆ ನೋಡಿಕೊಳ್ಳುವ ಬಗ್ಗೆ ಅವಸರ. ದಯಾಕರನ ಕೇಸ್‌ನಲ್ಲಿ ಯಾರದ್ದೂ ಪ್ರಾಣ ಹೋಗುವ ಅಪಾಯವೇನೂ ಇಲ್ಲವಲ್ಲ ಈಗಲೇ ಎನ್ನುವ ಖಾತ್ರಿಯೂ ಜೊತೆಗೆ.

ಅಂತೂ ಎರಡು ವಾರದ ನಂತರ ಇನ್ನೊಮ್ಮೆ ದಯಾಕರನನ್ನು ನ್ಯಾಯಾಧೀಶರ ಮುಂದೆ ಹಾಜರುಪಡಿಸಿದ್ದೂ ಆದ ಮೇಲೆ, ಇದೊಂದು 'ಸ್ಪೆಶಲ್ ಕೇಸ್' ಎಂದು ತೀರ್ಮಾನ ಮಾಡಿಸಿ, ನ್ಯಾಯಾಂಗ ಕಸ್ಟಡಿಯಿಂದ, ಜಾಮೀನಿನ ಮೇಲೆ, ಅವನನ್ನು ಬಿಡುಗಡೆ ಮಾಡಿಸಿ ಕರೆತಂದರು, ರಾಜಾರಾಯರು ತಮ್ಮ ವಕೀಲಿ ವೃತ್ತಿಯ ಜಾಣ್ಮನ ಉಪಯೋಗಿಸಿ. ಇದಕ್ಕಾಗಿ, ಊಟ ತಿಂಡಿಯ ಯೋಚನೆ ಬಿಟ್ಟು ರಾಜಾರಾಯರೊಡನೆ ಪಟ್ಟು ಹಿಡಿದು ಓಡಾಡಿದರು ವಸಂತರಾಯರು.

ಕಸ್ಟಡಿಯಿಂದ ಹೊರಬಂದ ದಯಾಕರನಲ್ಲಿ ಸಿಟ್ಟು ಕುದಿಯುತ್ತಿತ್ತು. ರಾಘವಪ್ಪನ ಆಪಾದನೆ ರಿಸರ್ವ್ ಮಾಡಿಸಬೇಕು ಎನ್ನುವ ಹಟ ಕಾಲ್ಬೆರಳಿನಿಂದ ತಲೆ ಕೂದಲವರೆಗೆ ಹಬ್ಬಿಕೊಂಡಿತ್ತು. ಈ ಆಪಾದನೆಯ ಅಡಿಯಲ್ಲಿ ಯಾರು ಯಾರು ಅಡಗಿ ಕುಳಿತಿದ್ದಾರೋ, ಅವರನ್ನೆಲ್ಲ ಅಗೆದು ಹೊರಹಾಕಬೇಕು ಎಂದು ಮನಸ್ಸು ನಿರ್ಧಾರ ತಳೆದಿತ್ತು. ತನ್ನನ್ನು ಕರೆಯಲು ಬಂದ ಹೆಂಡತಿಯನ್ನು ಬರೀ ಮುಗುಳ್ನಗೆಯಲ್ಲಿ ಮಾತಾಡಿಸಿ, ತಂದೆಯ ಜೊತೆಗೆ ಮನೆಗೆ ಹಿಂದಿರುಗುವಂತೆ ಹೇಳಿ, ತಾನು ವಕೀಲ ರಾಜಾರಾಯರೊಡನೆ ತನ್ನ ಪರಿಚಿತ ಮುಖದ ಭೇಟಿಗಾಗಿ ರತ್ನಾ ಟೈರ್ ಕಂಪೆನಿಯ ಕಡೆ ಆಗಲೇ ಹೊರಟ. ಹೆಸರು, ರಸ್ತೆ, ಸಂಪೂರ್ಣ ವಿಳಾಸ ಯಾವುದೂ ಗೊತ್ತಿಲ್ಲದ ಮನುಷ್ಯನನ್ನು ಅರಿಯಲು ಕಛೇರಿಯ ಹೆಸರೊಂದನ್ನು ಮಾತ್ರ ತಿಳಿದು ಹುಡುಕಲಾದೀತೇ? ಮಹಾತ್ಮಾ ಬಜಾರಿನಲ್ಲಿ ರತ್ನಾ ಟೈರ್? ಮಹಾತ್ಮಾ ಬಜಾರ್ ಎಂದರೆ ಒಂದೇ ರಸ್ತೆಯೇ? ಅಲ್ಲ, ಹಲವು ಮುಖ್ಯ ರಸ್ತೆ, ಅಡ್ಡ ರಸ್ತೆ, ಅಂಗಡಿ ಬೀದಿಗಳಿರುವ ಏಳೋ ಎಂಟೋ ಕಿ. ಮೀ. ಸುತ್ತಳತೆಯ, ಬೆಡಗಿನೂರಿನ ಒಂದು ಭಾಗ. ಹೇಗೆ ಹುಡುಕುವುದು ಎಂಬ ದುಗುಡ ಹೊತ್ತೇ ಹುಡುಕಾಟ ಆರಂಭಿಸಿದರು ವಕೀಲರು ಮತ್ತವರ ಗಿರಾಕಿ. ಮನ

ಸ್ಥಿದಲ್ಲಿ ಮಾರ್ಗವಿದೆ. ಮಾರ್ಗ ಸಿಕ್ಕ ಮೇಲೆ ದುರ್ಗವನ್ನೂ ಬೇಧಿಸಬಹುದಂತೆ. ಹತ್ತಾರು ಕಡೆ ವಿಚಾರಿಸಿದ ಮೇಲೆ ಕಂಪೆನಿ ಮತ್ತು ಕಛೇರಿ ಸಿಕ್ಕಿದುವು. ಕಛೇರಿಯ ಮುಂಭಾಗದ ಗಾಜಿನ ಕೌಂಟರಿನಲ್ಲೇ ದಯಾಕರನ ಕಣ್ಣಿಗೆ ಬಿದ್ದದ್ದು ಅವನಿಗೆ ಬೇಕಾದ ವ್ಯಕ್ತಿ. ಯಾವುದೋ ಮುದುಕ, ಅವರ ಚರಿತ್ರೆಯೇನು ಹೆಸರಾದರೂ ಕಟ್ಟಿಕೊಂಡು ತನಗೇನು ಮಾಡಬೇಕಾಗಿದೆ ಬಿಡು, ಎಂದು ತಾನೂ, ಸುಮಾನೂ ಅಸಡ್ಡೆಯಿಂದ ಕಂಡ ಅದೇ ವ್ಯಕ್ತಿ ಈಗ ತನಗೆಷ್ಟು ಅವಶ್ಯಕ? ಬಹುಶಃ ಅವರ ಒಂದೇ ಒಂದು ಮಾತಿನ ಮೇಲೆ ತನ್ನ ಬಾಳು ಹೇಗೆ ಬೇಕಾದರೂ ಪಲ್ಲಟಗೊಳ್ಳಬಹುದೇನೋ, ಯಾವನೋ ಮನುಷ್ಯ ಯಾವುದೋ ಅಪರಿಚಿತನೊಬ್ಬನ ಜೀವನಕ್ಕೆ ಹೇಗೆ ಸಹಾಯಕನಾಗಬಹುದು ಎಂದು ಹೇಳಲು ಎಷ್ಟು ಅಸಾಧ್ಯ? ಅಂದಿನ ಆ ಘಟನೆ ಬರೀ ಅರ್ಧ ಘಂಟೆಯದು. ಆದರೆ ಅದರಿಂದಾದ ಮುಂದಿನ ಪರಿಣಾಮ ಎಷ್ಟು ಘೋರ. ಜೀವನಪೂರ್ತಿ ಕಾಣಬಹುದಾದುದು. ಆ ಹುಡುಗನೂ ಅಪರಿಚಿತ. ಇವನೂ ಅಪರಿಚಿತನೇ. ಒಬ್ಬನ ದರ್ಶನದಿಂದ ಸಿಕ್ಕಿಬಿದ್ದು ಅವನ ಜೀವನಪೂರ್ತಿ ನಾಶವಾಗುವ ಸ್ಥಿತಿ. ಇನ್ನೊಬ್ಬ ಅಪರಿಚಿತನ ಮಾತಿನಿಂದ ಆ ದುಃಸ್ಥಿತಿ ಸಂಪೂರ್ಣ ಸುವ್ಯವಸ್ಥೆಯಾಗಬೇಕು, ಸಾಧ್ಯವೇ ಇದು? ಅದೇನೋ ಅವರ ಮುಖ ಕಂಡೊಡನೆಯೇ ಎಲ್ಲ ತೊಡಕುಗಳಿಂದ ಬಿಡುಗಡೆಯಾದಂಥ ಸಂತೋಷ ದಯಾನಿಗೆ. ಮನುಷ್ಯ ಸಿಕ್ಕ ಮೇಲೆ ತನ್ನ ಕೆಲಸ ಆಗಿಹೋಯಿತೇನೋ ಎನ್ನುವಂಥ ಸಮಾಧಾನ.

ಅಚ್ಚರಿಯಲ್ಲಿ ಕಣ್ಣು ಕಿರಿದುಗೊಳಿಸಿ, ಬಂದವರನ್ನೇ ದೃಷ್ಟಿಸಿತು ಕೌಂಟರಿನ ಮೇಲೆ ಕುಳಿತ ವ್ಯಕ್ತಿ. ಥಟ್ಟನೆ ನೆನಪಿಸಿಕೊಂಡು ಕೇಳಿತು.

"ಓಹ್, ಏನಾಯ್ತುರೀ ಆವತ್ತಿನ ಫಿಟ್ಸ್ ಪೇಷಂಟಿಗೆ? ಹುಷಾರಾದನಾ?"

"ಆ ಫಿಟ್ಸ್ ಪೇಶೆಂಟ್? ಅಂದರೆ......ಓಹ್......" ದಯಾಕರನಿಗೆ ಒಮ್ಮೆಲೇ ಬಿಡುಗಡೆಯ ಎಳೆ ಸಿಕ್ಕ ಹರುಷ. ಇಷ್ಟು ದಿನ ಮುದುಕ, ಮುದುಕಪ್ಪ ಎನಿಸಿದ ಆ ವ್ಯಕ್ತಿಯ ಬಗ್ಗೆ ಬಹುವಚನ ಉಪಯೋಗಿಸಿ ಗೌರವಿಸುವಂಥ ಆದರದ ಭಾವನೆ; ಪಕ್ಕದಲ್ಲಿದ್ದ ರಾಚಾರಾಯರ ಕಡೆ ತಿರುಗಿ,

"ನೋಡಿದ್ರಾ ಇವರಿಗೆ ಸತ್ಯ ಏನೂಂತ ಚೆನ್ನಾಗಿ ಗೊತ್ತು; ಮೈ ಗಾಡ್! ಅಂತೂ ಒಬ್ಬರಾದ್ರೂ ನಿಜ ಹೇಳುವವರಿದಾರೆ" ಎಂದವ "ಅಂದ್ಹಾಗೆ ತಮ್ಮ ಹೆಸರೇನು ಸ್ವಾಮಿ?" ಎಂದು ಮತ್ತೆ ಆ ಮುದುಕರತ್ತ ತಿರುಗಿ ಕೇಳಿದ, ಅವರ ಪ್ರಶ್ನೆಗೆ ಉತ್ತರ ಕೊಡುವ ವ್ಯವಧಾನವಿಲ್ಲದೇ",

"ಗುರುರಾಜ" ಎಂದು ತಮ್ಮ ಹೆಸರು ತಿಳಿಸಿದರು ಅವರು.

"ಮೀಟ್ ಮಿ॥ ರಾಜಾರಾವ್, ದಿ ಫೇಮಸ್ ಅಡ್ವೋಕೇಟ್" ದಯಾಕರ, ತಮ್ಮ ವಕೀಲರ ಪರಿಚಯ ಮಾಡಿಸಿದ.

ಆಮೇಲೆ ನಡೆದುದೆಲ್ಲವನ್ನೂ ವಿವರಿಸಿದಾಗ, ಅತ್ಯಂತ ಅಚ್ಚರಿ ಹಾಗೂ ಸಹಾನುಭೂತಿ ತೋರಿದ ಗುರುರಾಜ್, ಸಂತವಿಸುವ ದನಿಯಲ್ಲಿ ಹೇಳಿದರು.

"ಡೋಂಟ್ ವರಿ ದಯಾಕರ್, ನಿಮ್ಮ ಸಹಾಯಕ್ಕೆ ನಾನಿದ್ದೇನೆ. ನೋಡಿ ಹೀಗೆ ಯಾರಿಗೋ ಒಂದು ಚಿಕ್ಕ ಸಹಾಯ ಮಾಡಲು ಹೋಗಿ, ಈ ರೀತಿ ನಮ್ಮ ಮೇಲೇ ಆಪಾದನೆ ಹಾಕಿದ್ರೆ ಇನ್ನೊಮ್ಮೆ ಯಾರಿಗೆ ತಾನೇ ಸಹಾಯ ಮಾಡ್ಬೇಕು ಅನ್ಸುತ್ತೆ? ನೀವು ಅನುಭವಿಸಿದವರಿಗೇ ಅಲ್ಲ ಇದನ್ನು ನೋಡಿದ ನಮ್ಮಂಥವರಿಗೂ, ಕೇಳಿದವರಿಗೂ ಯಾವತ್ತೂ, ಯಾರಿಗೂ ಏನೂ ಸಹಾಯ ಮಾಡಬಾರದು ಅಂತ ಪಾಠ ಕಲಿಸೋ ಘಟನೆ ಆಗಿಬಿಡುತ್ತೆ ಇದು. ಆದ್ರೆ ಹಾಗಾಗೋದು ಬೇಡ. ಒಬ್ಬರಿಗೆ ನಾವು ಸಹಾಯ ಮಾಡಿದಾಗ, ಮಾಡಿಸಿಕೊಂಡೋರು ನಮ್ಮ ಮೇಲೆ ತಿರುಗಿ ಬಿದ್ರೂ, ನಮ್ಗೆ ಸಹಾಯ ಮಾಡೋಕೆ ಬೇರೆಯವರೂ ಇರ್ತಾರೆ ಅಂತ ನಾನು ತೋರಿಸಿ ಕೊಡ್ತೀನಿ. ಬಹುಶಃ ಆ ರಾಘವಪ್ಪನಿಗೆ ದುಡ್ಡಿನ ಅಗತ್ಯ ತುಂಬಾ ಇರಬೇಕು, ಪಾಪ ಕೆಲವು ಪರಿಸ್ಥಿತಿಗಳೂ ಒಳ್ಳೆಯ ಮನುಷ್ಯನನ್ನು ಕೆಟ್ಟವನನ್ನಾಗಿ ಮಾರ್ಪಡಿಸುತ್ತವೆ. ಇರ್ಲಿ ಅದು, ಈಗೇನು ಕಾಫಿ ತೊಗೊಳ್ತೀರಾ? ಇಲ್ಲಾ ಟೀ ತರಿಸಲಾ?"

ಮಧ್ಯಾಹ್ನ ಒಂದು ಘಂಟೆ ಆಗಿ ಹೋಗಿದ್ದರೂ, ತನ್ನ ಹೊಟ್ಟೆಯೊಳಗಿನ ಹಸಿವು ಒಂದೇಸಮನೆ ಕೂಗುಹಾಕುತ್ತಿರುವುದನ್ನು ತಾನು ಕೇಳಿಸಿಕೊಂಡೇ ಇಲ್ಲ ಎಂಬುದು ದಯಾಕರನ ಗಮನಕ್ಕೆ ಬಂದುದು ಆಗಲೇ.

ಏನಾದ್ರೂ ಸರಿ ಸಾರ್, ಬೆಳಿಗ್ಗೆ ಒಂದು ಲೋಟ ಕಾಫಿ ಕುಡಿದುದಷ್ಟೇ

ನಾನು, ಈ ಗಲಾಟೇಲಿ ಹೊಟ್ಟೆ, ಹಸಿವೆಗಳು ಎಲ್ಲಿವೆ ಅನ್ನೋದೇನು, ನಾನು ಯಾರು ಅನ್ನೋದೇ ಕನ್‌ಪ್ಯೂಸ್ ಆಗೋ ಹಾಗಾಗಿದೆ" ಎದುರಿಗಿದ್ದವರು ಆಗಲೇ ತೀರ ಆತ್ಮೀಯರಾಗಿಬಿಟ್ಟಿದ್ದಾರೆ ಎನ್ನುವಂತೆ ಸಲಿಗೆಯಿಂದ ತಿಳಿಸಿದ ದಯಾಕರ.

"ಹ್ಲಾ, ಗುರುರಾಜ್ ನೀವು ಈಗ ಸಿಕ್ಕಿರದೇ ಇದ್ರೆ, ತಾನೇತಾನಾಗಿ, ನಾನೇ ಕೊಲೆಗಾರ ಅಂತ ಪೋಲೀಸರ ಮುಂದೆ ಹೇಳಿಕೆ ಕೊಟ್ಟುಬಿಡ್ತಿದ್ರು ಇವ್ರು, ಅಲ್ವಾ ದಯಾಕರ? ಎಂದು ವಕೀಲರು ತಮಾಷೆಯಾಗಿ ಕೇಳಿ ನಕ್ಕಾಗ, 'ಹುಂ ಖಂಡಿತ ಹಾಗೇ ಆಗ್ತಿತ್ತು', ಎಂದು ನಕ್ಕವನಿಗೆ, ಎಷ್ಟೋ ದಿನಗಳಿಂದ ಮರೆತೇ ಹೋದಂತಾಗಿದ್ದ ನಗು, ಈಗ ನೆನಪಿಗೆ ಬಂದ ಹಾಗಾಗಿತ್ತು.

ಕಾಫಿ ಹೀರುವಾಗ, ದಯಾಕರ ಮತ್ತು ವಕೀಲರು, ಮೌನವಾಗಿ ಕಛೇರಿಯ ಸುತ್ತ ಒಮ್ಮೆ ಕಣ್ಣಾಡಿಸಿದರು.

ರಸ್ತೆಯ ಬದಿಗೆ ಸ್ವಲ್ಪ ಜಾಗ ದಾಟಿದ ಮೇಲೆ ಇರುವ ದೊಡ್ಡದಾದ ವಿಶಾಲ ಕಟ್ಟಡ, ಕಟ್ಟಡದ ಮುಂಬಾಗಿಲ ಬಲಗಡೆಯ ಒಂದು ಪಾರ್ಶ್ವ, ಮ್ಯಾನೇಜರಾದ ಗುರುರಾಜ್‌ಗಾಗಿ, ಮರ ಮತ್ತು ಗಾಜಿನ ಗೋಡೆಗಳಿರುವ ಅಂದವಾದ ಕಛೇರಿ ಕೋಣೆ ಅದು. ಉಳಿದೊಂದು ಹಾಲ್‌ನಲ್ಲಿ ನಾಲ್ಕೈದು ಗುಮಾಸ್ತರು, ಒಂದಿಬ್ಬರು ಜವಾನರು. ಬಯಲಿನಲ್ಲಿ ಅಲ್ಲಲ್ಲಿ ನಿಂತ ಐದಾರು ವಾಹನಗಳೊಡನೆ ಏನೋ ಕೆಲಸದಲ್ಲಿ ತಲ್ಲೀನರಾಗಿರುವ ಕೆಲವು ಕೂಲಿಗಳು, ಮೆಕಾನಿಕ್‌ಗಳು.

"ಈಗ ಏನ್ ಸಹಾಯ ಮಾಡ್ಬಹುದು ನಾನು, ಹೇಳಿ ವಕೀಲರೇ? ಆ ದಿನ ನನ್ನ ಜೊತೆಗೆ ನಿಂತಿದ್ದ ನಾಲ್ವರಲ್ಲಿ ಒಬ್ಬರು ನನ್ನ ಗೆಳೆಯ, ಇನ್ನೊಬ್ಬ ನಮ್ಮ ಕಛೇರಿಯ ಆ ಸಹೋದ್ಯೋಗಿ, ಅದೋ ಅಲ್ಲಿದ್ದಾರೆ ನೋಡಿ", ಕೈ ತೋರುತ್ತ ಹೇಳಿದರು ಗುರುರಾಜ್. ವಕೀಲರ ಜೊತೆಗೆ ಬಂದಿದ್ದ ಆಗಂತುಕನನ್ನು, ಕೌತುಕದಿಂದ ನೋಡಿ, ನೋಡಿ, ಗುರುತು ಹಿಡಿದ ಆ ಸಹೋದ್ಯೋಗಿ, ಕರೆಯದೆಯೇ ಎದ್ದು ಬಂದು ತಾವಾಗಿಯೇ ಕೇಳಿದರು.

"ಏನ್ರೀ. ಆ ದಿನ ಏನಾಯ್ತು ? ಆ ಹುಡುಗಂಗೆ ಆಸ್ಪತ್ರೆಗೆ ಸೇರ್ಸಿದ್ರಾ ? ಹುಶಾರಾಗಿ ಮನೆಗೆ ಹೋಗುವ ತನಕ ಇದ್ರಾ ಹೇಗೆ ನೀವು?"

ಎನ್ನುವಾಗ, ಆ ದಿನ ದೀಪದಡಿಯಲ್ಲಿ ಕಂಡಂತಿದ್ದ ಮುಖವನ್ನು ದಯಾಕರನೂ ಗುರುತಿಸಿದ.

ದಯಾಕರ ಮತ್ತೊಮ್ಮೆ ನಡೆದ ಘಟನೆಯನ್ನು ವಿವರಿಸಿದ, ಎರಡು ಮುಖ್ಯ ಸಾಕ್ಷಿಗಳು ಒಂದೇ ಕಡೆ ಸಿಕ್ಕಿದ್ದವು ಅವನ ವಕೀಲರಿಗೆ ಇಬ್ಬರದೂ ಹೇಳಿಕೆಯ ಪ್ರಕಾರ ಆ ದಿನ ಘಟಿಸಿದ್ದು ಹೀಗಿತ್ತು.

ಗುರುರಾಜ್, ಅವರ ಗೆಳೆಯ ಮತ್ತು ಮೇಲೆ ತಿಳಿಸಿದ ಸಹೋದ್ಯೋಗಿ, 5 ಘಂಟೆಗೆ ಕಛೇರಿ ಬಿಟ್ಟು, ಯಾವುದೋ ಕೆಲಸದ ತರಾತುರಿಯಲ್ಲೇ ಹೊರ ಹೊರಟಿದ್ದು, ಸುಶೀಲ ನಗರದ ಪಾರ್ಕ್‌ನ 4ನೇ ಮುಖ್ಯ ರಸ್ತೆಯಲ್ಲಿ ಸ್ವಲ್ಪ ದೂರ ನಡೆದದ್ದು. ಸುರೇಶ ಬಿದ್ದಿದ್ದ ಕಡೆ ಬಂದಾಗ ಆರು ನಲವತ್ತೋ ಏಳೋ ಆಗಿರಬೇಕು. ಎದುರಿಗೆ ನಡೆದು ಬಂದ ಆ ಹುಡುಗ ಫುಟ್‌ಪಾತ್ ಬಳಿ ಓಲಾಡುತ್ತ ಹೆಜ್ಜೆ ಇಟ್ಟು, ರಪ್ಪನೆ ಬಿದ್ದ. ಗಾಬರಿಯಿಂದ ಈ ಮೂವರೂ ಓಡಿ ಹೋಗಿ ನೋಡಿದಾಗ ಅವನ ಬಾಯಲ್ಲಿ ಬುರುಗು, ಸೆಟೆದು ಅದುರುವ ಕೈ, ಕಾಲು ಅವನಿಗೆ ಮೂರ್ಛೆ ರೋಗ ಬಂದಿದೆಯೆಂದು ತಿಳಿಸಿದವು. ಹರೆಯ ಮತ್ತು ಸೌಂದರ್ಯ ಯಾರದೇ ಆಗಲಿ, ಇಂಥ ಸಮಯದಲ್ಲಿ, ಯಾರ ಮರುಕವನ್ನಾದರೂ ಹೆಚ್ಚಿಸಬಲ್ಲದು. ಲಕ್ಷಣವಾದ ಮುಖದ, ಅಂದದ ಉಡುಪಿನ ಹರೆಯದ ಹುಡುಗ ತಮ್ಮೆದುರಿಗೆ ಬಿದ್ದದ್ದು ಕಂಡಾಗ, ಅಯ್ಯೋ ಪಾಪ ಅನ್ನಿಸಿತು ಈ ಮೂವರಿಗೂ ಮೂರ್ಛೆರೋಗ ಬಂದವರನ್ನು ಹತ್ತಿರದಿಂದ ನೋಡುವ ಧೈರ್ಯವಿಲ್ಲದ ಗುರುರಾಜರ ಗೆಳೆಯ ಅಲ್ಲಿ ನಿಲ್ಲಲಾಗದೆ, "ನಾನು ಹೋಗುತ್ತೇನಪ್ಪ, ನಂಗೆ ನೋಡೋಕೆ ಭಯ ಇದು" ಎಂದು ಹೇಳಿ ಹೊರಟು ಹೋದರು. ಉಳಿದಿಬ್ಬರು ಏನು ಮಾಡಲೂ ತೋಚದೆ ಹುಡುಗನ ಕೈ, ಕಾಲುಗಳ ಬೆರಳು ಹಿಡಿದೆಳೆದು, ಎದೆ ನೀವಿ, ಫುಟ್‌ಪಾತಿನ ಕಲ್ಲಿನ ಮೇಲೆ ಜೋತಾಡುತ್ತಿದ್ದ ತಲೆ ಎತ್ತಿ, ಈಚೆಗೆ ಸರಿಸಿ, ಸರಿಯಾಗಿ ಮಲಗಿಸಿದರು. ನೀರು, ಗೀರು ತಂದು ಸಿಂಪಡಿಸಲು, ಅಕ್ಕ ಪಕ್ಕ ಮನೆಗಳೂ ಇಲ್ಲ. ಈ ಖಾಯಿಲೆಗೆ ಧಿಡೀರ ಚಿಕಿತ್ಸೆ ಇಬ್ಬರಿಗೂ ತಿಳಿಯದು. ಕೊಂಚ ದೂರದಲ್ಲಿದ್ದ, ಸಾಲು ಮನೆಗಳಿಗೆ ಹೋಗಿ ಕೇಳಲು ಇಬ್ಬರಿಗೂ ಸಂಕೋಚ, ಆಗಲೇ ಇನ್ನಾರೋ ಇಬ್ಬರ್ಮ ದಾರಿಹೋಕರು, ಅವರೊಡನೆ ಬಂದು ನಿಂತು ಕುತೂಹಲದಿಂದ

ಸುಮ್ಮನೇ ಬಗ್ಗಿ ನೋಡಿ. ಸ್ವಲ್ಪ ಇದರ ಬಗ್ಗೆ ತಿಳಿದಿರುವಂತೆ, ಇದಕ್ಕೆ ಏನೂ ಮಾಡೋಕಾಗಲ್ಲ ತಾನೇ ಕಡಿಮೆಯಾಗಬೇಕಷ್ಟೆ" ಎಂದು ಸುಮ್ಮನೆನಿಂತು ನೋಡಿದರು. ಆ ಮೇಲೆ ಅವರೇ ಪಾರ್ಕ್ ಬದಿಯ ಸಾಲು ಮನೆಯೊಂದಕ್ಕೆ ಹೋಗಿ ನೀರೂ ಇಸೆದು ತಂದು, ಹುಡುಗನ ಬಾಯಿಗೆ ಹಾಕಿ ಮುಖ ತಲೆ ಗೆಲ್ಲಾ ಸಿಂಪಡಿಸಿ ಸ್ವಚ್ಛ ಮಾಡಿದರು ಪಾಪ ಉಳಿದ ನೀರನ್ನು ಅಲ್ಲೇ ಚೆಲ್ಲಿದರು.

ತಾನೇ ತಾನಾಗಿ ಆ ಹುಡುಗನ ನಡುಕ ಕಡಿಮೆಯಾಗುತ್ತ ಹೋಗಿತ್ತು ನೀರು ತರುವ ಮೊದಲೆ, ನಡುಕ ಪೂರ್ತಿ ನಿಂತರೂ, ಹುಡುಗ ಕಣ್ಣುಬಿಡದೆ ಮಲಗಿದ್ದ. ದಯಾಕರ ಕಾರಿನಲ್ಲಿ ಬಂದದ್ದು ಆಗಲೇ ಅಲ್ಲಿಗೆ. ಗುರು ರಾಜ್ ಕಾರಿನ ಮುಂದೆ ಬಂದು, ರಸ್ತೆಯ ಬಲ ಪಕ್ಕದಲ್ಲಿ ಬಿದ್ದಿದ್ದ ಹುಡುಗ ನನ್ನು ತೋರಿಸಿ, ಸಹಾಯ ಮಾಡುವಂತೆ ಕೇಳಿಕೊಂಡಿದ್ದು ಅಷ್ಟೋತ್ತಿ ಗಾಗಲೇ ಸಾಕಷ್ಟು ಸಮಯವಾದುದರಿಂದ, ಗುರುರಾಜರ ಸಹೋದ್ಯೋಗಿ, ತಮ್ಮ ಮನೆಗೆ ಯಾರೋ ಅತಿಥಿಗಳು ಬರುವವರಿದ್ದಾರೆಂದು ತಿಳಿಸಿ, ಅಲ್ಲಿಂದ ಮುಂದೆ 45ನೇ ಅಡ್ಡರಸ್ತೆಯಲ್ಲಿರುವ ತಮ್ಮ ಮನೆಗೆ ನಡೆದರು. ಇಬ್ಬರು ದಾರಿಹೋಕರು, ಹೇಳದೇ ಕೇಳದೇ ದಾರಿ ಬಿಟ್ಟರು.

ಗುರುರಾಜ್‌ಗೂ ಮನೆಗೆ ಹೋಗುವ ಆತುರವಿದ್ದರೂ, ಪಾಪ ಆ ಹುಡುಗನನ್ನು ದಯಾಕರ ದಾರಿಯಲ್ಲೇ ಕೈ ಬಿಟ್ಟರೆ ಎನ್ನುವ ಕರುಣೆ ಯಿಂದಲೂ ಮತ್ತು ಗುರುತಿಲ್ಲಾದ, ಅವನಿಗೆ ಸಹಾಯ ಮಾಡಲು ಹೇಳಿ, ತಾನೂ ಪಾರಾಗುವುದು ಉಚಿತ ಅಲ್ಲ ಎನಿಸಿ, ಆಸ್ಪತ್ರೆಯವರಿಗೆ ಹೋಗಿದ್ದು ಅಲ್ಲಿ ಒಳ ಹೋದರೆ ತಡವಾಗುತ್ತದೆ ಧಾರವಾಡಕ್ಕೆ 9–30ರ ಟ್ರೈನ್‌ಗೆ ಹೊರಟಿರುವ ತನ್ನ ಹೆಂಡತಿಗೆ ರೈಲ್ವೇ ನಿಲ್ದಾಣಕ್ಕೆ ಕರೆದೊಯ್ಯಲಾಗದೇ, ರಿಸರ್ವ್ ಮಾಡಿಸಿದ ಹಣ ಕಳೆದುಕೊಳ್ಳಬೇಕಾಗುತ್ತದೆ ಎನ್ನುವ ಅವಸರಕ್ಕೆ ಅಲ್ಲಿ ನಿಲ್ಲದೇ ವಾಪಸು ಓಡಿ ಹೋದದ್ದು ದಯಾಕರ್ ಅವರ ಮೇಲೆ ಆಪಾ ದನೆ ಬರಬೇಕೆಂದಾಗಲೇ ಏನೇ ತೊಂದರೆ ಬಂದರೂ ತಮ್ಮ ತಲೆಗೆ ಬರುವು ದೆಂಬ ಭಯದಿಂದಾಗಲೀ ಬಿಟ್ಟು ಹೋದುದಲ್ಲ, ಎಂದು ಗುರುರಾಜ್ ರವರು ಮತ್ತು ಅವರ ಸಹೋದ್ಯೋಗಿಯೂ ವಿವರಿಸಿದುದೆಲ್ಲವನ್ನೂ ರಿಕಾರ್ಡ್ ಮಾಡಿಕೊಂಡರು ರಾಜಾರಾಯರು. ಇಷ್ಟೇ ಅಲ್ಲದೇ, ಕಛೇರಿ

ಯನ್ನು ನೋಡುವ ಸಲುವಾಗಿ ಎಂಬಂತೆ ಎಲ್ಲಾ ಕಡೆ ಸುತ್ತು ಹಾಕಿದ ರಾಜಾರಾಯರು ಕಛೇರಿಯ ಕೆಲವರೊಡನೆ ಮಾತಾಡಿ ಗುರುರಾಜ್ ಮತ್ತು ಅವರ ಸಹೋದ್ಯೋಗಿ, ಶಂಕರಪ್ಪನವರ ಗುಣ, ಸ್ವಭಾವಗಳ ಬಗ್ಗೆ ಕೇಳಿ, ಅವರಿಬ್ಬರೂ ತುಂಬಾ ಪರೋಪಕಾರ ಬುದ್ಧಿಯವರು ಎಂಬ ವಿಷಯವನ್ನು ಸ್ಪಷ್ಟಗೊಳಿಸಿಕೊಂಡ ಮೇಲೆ ಪ್ರಥಮ ವಿಚಾರಣೆ ಅಂದಿಗೆ ಮುಗಿಸಿ, ಮನೆಗೆ ಬಂದರು ಇಬ್ಬರೂ.

ಇನ್ನೊಂದು ದಿನ ದಯಾಕರ ತಮ್ಮ ಪ್ರವಾಸ ಯೋಜನೆಯ ಬಗ್ಗೆ ಮಾತಾಡುತ್ತ ಸುಮನಾಳ ಜೊತೆ ಹೊರಗಿನ ವರಾಂಡದಲ್ಲಿ ಕೂತಿದ್ದ, ಸುಮ್ನೇ ತನಗನಿಸಿದ್ದು ಹೇಳಿದ. "ಸುಮಾ, ನಾವು ಆ ದಿನ ಸೀದಾ ನಮ್ಮ ಪ್ರಯಾಣ ಮುಂದುವರಿಸಿದ್ರೆ, ಇವೊತ್ತು ಎಲ್ಲಿ—? ಆಂ, 10 ಅಲ್ವಾ ತಾರೀಖು ಇವೊತ್ತು ? ಹಾಂ...ಡೆಲ್ಲನಲ್ಲಿ ಇರ್ಬೇಕಾಗಿತ್ತು, ಈ ದಿನ. ಅಷ್ಟ ಪ್ರೋಗ್ರಾಂ ಕ್ಯಾನ್ಸಲ್ ಮಾಡಿದ ಬಗ್ಗೆ ನನ್ನ ಫ್ರೆಂಡ್‌ಗೆ ಬರ್ದು ತಿಳಿಸಿದಾ ರಂತೆ. ಅವರಿಗೆ ಗೊತ್ತಿರೋದೇ ನನ್ನ ಫ್ರೆಂಡ್ ಕಮಲಾರಾಮ್ ಒಬ್ಬನೇ, ಅವನೇ ಈಗ ಡೆಲ್ಲಿನಲ್ಲಿರೋದು. ಆದ್ರೆ ನಾಳಿನಿಂದ ಇನ್ನೊಂದೆಂಟು ದಿನಕ್ಕೆ ನಮ್ಮ ಬೋರೇ ಮುಗಿದು ಹೋಗ್ತಿತ್ತು. ಈಗ ನಾನೂ, ಕಮಲಾರಾಮ್‌ಗೆ ಕಾಶ್ಮೀರದಲ್ಲಿರುವ ಬೌನಿಗೆ. ನನ್ನ ಸದಾ ರೇಗಿಸ್ಕೊಂಡು ಓಡಾಡಿಕೊಂಡಿ ರ್‍ತಿದ್ನಲ್ಲ ರಮೇಶ ? ಅವನಿಗೆ ಎಲ್ಲರಿಗೂ ಟೆಲಿಗ್ರಾಂ ಕೊಟ್ಟಿದ್ದೀನಿ, ನಮ್ಮ ಪ್ರೋಗ್ರಾಂಸ್ ಎಲ್ಲಾ ಸದ್ಯಕ್ಕೆ ಕ್ಯಾನ್ಸಲ್ ಅಂತ. ಟೆಲಿಗ್ರಾಂ ಅದ್ರೂ, ಇನ್ನೂ ಮೊದ್ಲೇ ಕೊಡೋಕಾಗಿದ್ದಿದ್ರೆ ಚೆನ್ನಾಗಿತ್ತು",

ಸುಮಾ ಬೇಸರದಿಂದ ಗೊಣಗಿಕೊಂಡಳು. "ಎಲ್ಲಾ ಬರೀ ರೇನೇ, ಸುಮ್ನೆ ಹೋಗಿದ್ದರೆ, ಇಣುಕದಿದ್ದರೆ...ಕೊಟ್ಟಿದ್ದರೆ...ಅನ್ನೋದೇ ಆಗಿ ಹೋಯ್ತು. ಈ "ರೇ" ಎನ್ನುವ ಪದವನ್ನು ಉಪಯೋಗಿಸದೇ ಜೀವನ ನಡೆಸುವಂತಿದ್ದಿದರೆ...? ಹುಂ–ಮತ್ತೆ ಅದೇ ರೇ."

ಸಣ್ಣಗೆ ನಕ್ಕ ದಯಾಕರ ಕುರ್ಚಿಯ ಬೆನ್ನಿಗೆ ತಲೆ ಅನಿಸಿ, ಮೈ ಮುರಿ ಯುತ್ತಾ ಹೇಳಿದ "ಸುಮಾ ಮನೇಲಿದ್ರೆ, ಬರೀ ಪೋಲಿಸ್ರು, ವಕೀಲ್ರು, ಪ್ರಶ್ನೆ ಉತ್ತರ, ತಲೆನೋವು ಇಷ್ಟೇ ಈಗಿನ ಬದುಕು ಅನ್ನೋ ಹಾಗಾಗಿ

ಬಿಡುತ್ತೆ. ಹಾ. ಹೇಗಿದ್ರೂ ರಜಾ ಹಾಕಿದೀನಿ. ಸ್ವಲ್ಪ ಹೊರಗ್ಹೋಗಿ ಬರೋಣ್ವಾ"?

ತಲೆ ಆಡಿಸಿದ ಸುಮಾ, 5 ನಿಮಿಷದಲ್ಲೆ ರೆಡಿ ಆಗಿ ಬರ್ತೀನಿ. ಎನ್ನುತ್ತಾ ಮೇಲೆದ್ದಳು. ಹಾಸಿಗೆಯಿಂದ ಮೇಲೇಳದೇ ಇನ್ನೂ ಸಂಪೂರ್ಣ ಆರೋಗ್ಯ ಸರಿ ಹೊಂದದ ತಾಯಿಯನ್ನು ನೋಡಿಕೊಳ್ಳಲು ವಸಂತರಾವ್ ಮನೆಯಲ್ಲೇ ಇರುತ್ತಾರೆಯೇ, ತಾವು ಬರುವ ತನಕ ಎಂಬುದನ್ನು ಖಚಿತಗಡಿಸಿಕೊಂಡಳು ಸುಮಾ ಮೊದಲು.

ನೀಟಾಗಿ ಡ್ರೆಸ್ ಮಾಡಿಕೊಂಡು ಹೊರಟ ಜೋಡಿ. ಇನ್ನೂ ಮೆಟ್ಟಲಿಳಿಯುತ್ತಿರುವಾಗಲೇ ಅವರ ಮೂಡ್ ಹಾಳು ಮಾಡಲು ಯಾವುದೋ ಕವರ್ ಹಿಡಿದು ಬಂದಿದ್ದ ಯಾರೋ ಅವರಿಗೆ ತಿಳಿಯದ ಒಬ್ಬ ಅಪರಿಚಿತ ಅವಧೂತ. ವಿಳಾಸ ಪರಿಶೀಲಿಸಿ ಸಹಿ ಹಾಕಿ ಅವನು ಕೊಟ್ಟ ಕವರನ್ನು, ಕೂತಹಲದಿಂದಲೇ ತೆಗೆದುಕೊಂಟು ಒಡೆದು ನೋಡಿದಳು ಸುಮನಾ. ದಯಾಕರ ಮತ್ತು ಸುಮನಾರನ್ನು ಕೊಲೆಪಾತಕಿ ಹಾಗೂ ಕಳ್ಳತನ ಮಾಡಿದವರೆಂದು ಆಪಾದಿಸಲಾದ ಕೋರ್ಟಿನಿಂದ ಬಂದ ಚಾರ್ಜ್ ಷೀಟ್ ಅದು, ಕೋರ್ಟಿನ ಜವಾನನೇ ಅವನು ಎನ್ನುವುದರಲ್ಲಿ ಸಂಶಯ ಉಳಿಯಲಿಲ್ಲ.

ಸುಮಾ ಕಾಗದವನ್ನು ಬಿಚ್ಚಿ ಓದಿದಳು "ಐ ದಯಾಳುವರ್ಮಾ, ಮ್ಯಾಜಿಸ್ಟ್ರೇಟ್ ಆಫ್‌ಸೆಷನ್ ಕೋರ್ಟ್. ಹಿಯರ್ ಬೈ ಚಾರ್ಜ್ ಯು ಸುಮಾ ಅಂಡ್ ದಯಾಕರ್ ಲ್ಯಾಸ್ ಫಾಲೋಸ್ :-

ದಟ್ ಯು, ಆನ್ ದಿ ಡೇ ಆಫ್ 30th ಮೇ 4th ಮೇನ್‌ರೋಡ್ ಸುಶೀಲಾನಗರ, 15th ಬ್ಲಾಕ್, ರಾಬ್ಡ್ ರೂ 10.000 :- ಫ್ರಮ್ ಶ್ರೀ ಸುರೇಶ್ ಮುರುಕಿನಮನಿ ಅಂಡ್ ಮರ್ಡರ್ಡ್ ಹಿಮ್ ಸುಮಳ ಕಣ್ಣುಗಳಲ್ಲಿ ತುಂಬಿಕೊಂಡು ಕೆಳಗುರುಳುತ್ತಿದ್ದ ನೀರು, ಕೆಲವು ಅಕ್ಷರಗಳು ಮಂಜು ಮಂಜಾಗಿ ಕಾಣುವಂತೆ ಮಾಡಿತು. ಉಗುಳು ನುಂಗಿ ಮುಂದೆ ಓದಿದಳು ಸುಮ"...ಎಗೆನಸ್ಟ್ ದಿ ಗೌರ್ನಮೆಂಟ್ ಆಫ್ ಇಂಡಿಯಾ ಅಂಡ್ ದೇರ್‌ಬೈ ಕಮ್ಮಿಟ್ಟೆಡ್ ಲ್ಯಾನ್ ಆಫೆನ್ಸ್ ಪನಿಷಬಲ್ ಅಂಡರ್ ಸೆಕ್ಷನ್ 302, ಆಫ್ ದಿ ಐ ಪಿ ಸಿ ಅಂಡ್ ವಿತಿನ್ ದಿ ಕಾಗ್ನಿಸೆನ್ಸ್ ಆಫ್ ದಿ ಕೋರ್ಟ್.

(ಸಿ) ಅಂಡ್ ಐ ಹಿಯರ್ ಬೈ ಡೈರೆಕ್ಟ್ ಯು ಬಿ ಟ್ರೈಡ್ ಬೈ ದಿಸ್ ಕೋರ್ಟ್ ಆನ್ ದಿ ಸೆಡ್ ಚಾರ್ಜ್.

ದಯಾಳು ವರ್ಮಾ
ಸೆಷನ್ಸ್ ಜಡ್ಜ್
ಸೆಷನ್ಸ್ ಕೋರ್ಟ್. ಬೆಡಗಿನೂರು

ಕಣ್ಣೀರಿನ ಮೂಲಕ ಕಾಗದದ ಮೇಲೆ ಬಿದ್ದ ಮಂಜಾದ ದೃಷ್ಟಿಯಿಂದ ಓದಿಕೊಂಡಳು ಸುಮಾ, ಮನೆ ಬಿಟ್ಟು ಎಲ್ಲೂ ಹೋಗದ ಹೆಣ್ಣು, ಮನೆಯ ಕಾರ್ಯಕಲಾಪಗಳಷ್ಟೇ ಸೀಮಿತವಾದ ಅವಳ ಕಾರ್ಯಭಾರ, ಈಗ ಈ ಘಟನೆಯಿಂದ ಹೊರಗೂ ಹೊರಡದಂತೆ, ಪೋಲೀಸ್ ಸ್ಟೇಷನ್, ಕೋರ್ಟ್ ಇತ್ಯಾದಿಗಳಿಗೂ ಓಡಾಡುವಂತೆ ಬಲವಂತಿಸಿತ್ತು.

ಗೃಹಿಣಿ ಮಾತ್ರ ಆಗ ಬಯಸುವ. ಅದಕ್ಕಿಂತ ಹೆಚ್ಚು ಮುಂದು ವರಿಯುವ ಮನಸ್ಸೇ ಇಲ್ಲದ ಶ್ರೀಮಂತ ಮನೆತನದ ಹೆಣ್ಣಿಗೆ, (ಅಥವಾ ಗೃಹಿಣಿ ಮಾತ್ರವಾದರೇ ಮರ್ಯಾದಸ್ಥರು ಎಂದುಕೊಳ್ಳುವ ಹೆಣ್ಣಿಗೆ.) ಮೊಟ್ಟ ಮೊದಲ ಇಂಥ ಸಂದರ್ಭ ಅಳಿಸಿಯೇ ಅಳಿಸುತ್ತದೋ ಏನೋ. ಅದೂ ಆರೋಪಿಯಾಗಿ; ಎಲ್ಲರೆದುರು ತಪ್ಪಿತಸ್ಥೆಯಾಗಿ ಹೊರಗೆ ಕಾಣಿಸಿ ಕೊಳ್ಳುವುದು, ಇಂಥವರಿಗೆ ಎಂಥಾ ಸಂಕಟದ ವಿಷಯ ? ಸುಮಾಳೂ ಹಾಗೆನಿಸಿಯೇ ಏನೋ ಬೇಕಾದಷ್ಟು ಅತ್ತಳು.

ಮೊದಲೇ ಆಗಿಹೋದ ಘಟನೆ. ಎಂದೋ ತಲೆಗೇರಿದ ಆರೋಪ, ಆದರೂ ಹೊರಗಡೆ ತಿರುಗಾಡಿ ಬರುವ ಅವಳ ಆಸಕ್ತಿ. ಚಾರ್ಜ್ ಷೀಟ್ಸ್ ನೋಡಿದಾಗ ಜರ್ರನೆ ಇಳಿದುಹೋಗಿತ್ತು. ಅಯ್ಯೋ ನಾನು ಇವೊತ್ತು ಎಲ್ಲೂ ಬರೋಲ್ಲಪ್ಪ" ಎಂದಳು. ಮೂಗೆಳೆಯುತ್ತಾ, ದಯಾಕರನೂ ಅವಳನ್ನು ಬಲವಂತಿಸುವ ಮೂಡ್‌ನಲ್ಲಿರಲಿಲ್ಲ. ತಾನು ಮಾಡಬೇಕಾದ ಕೆಲಸಗಳ ಬಗ್ಗೆ ಲೆಕ್ಕ ಹಾಕುತ್ತಾ, ಹಿಂದಿರುಗಿ ಬಂದು, ವೆರಾಂಡದ ಕುರ್ಚಿಯ ಮೇಲೆ ಕುಳಿತು ಯೋಚಿಸತೊಡಗಿದ, ತನಗೆ ಬಂದ ಚಾರ್ಜ್‌ಷೀಟನ್ನು ಇನ್ನೊಮ್ಮೆ ಹಿಡಿದು ಓದಿಕೊಳ್ಳುತ್ತಾ.

ಈ ಬಗ್ಗೆ ಮಾತೇ ಆಡಬಾರದು, ಕೆಲವು ಕ್ಷಣಗಳಾದರೂ ಮರೆತು,

ಹೊರಜಗತ್ತಿನಲ್ಲಿ ಸುತ್ತು ಹಾಕಿ, ಬರಬೇಕೆಂದುಕೊಂಡ ಸಂಗಾತಿಗಳು ಚಾರ್ಜ್ ಷೀಟ್ ನೋಡಿದ ಮೇಲೆ ಮತ್ತೆ ಅದೇ ಮಾತು ಆರಂಭಿಸಿದರು.

"ಅಕಸ್ಮಾತ್ ನಾವು ಕೊಲೆಗಡುಕರೇ ಎನ್ನುವುದು ಸಾಬೀತಾದರೆ ಅದರ ಪರಿಣಾಮ ಏನು ಗೊತ್ತಾ ಸುಮಾ"? ದಯಾಕರ ತನ್ನ ಯೋಚನೆಯ ಆರಂಭದ ಎಳೆಯನ್ನು ಅವಳ ಮುಂದಿಟ್ಟ.

"ಊಹ್ಞೂ ಸರಿಯಾಗಿ ಗೊತ್ತಿಲ್ಲ, ಜೈಲಿಗಂತೂ ಹೋಗ್ಬೇಕು. ಎಷ್ಟು ವರ್ಷ ಅಂತ ಗೊತ್ತಿಲ್ಲ. ಅಲ್ಲಿ ಹೇಗಿರುತ್ತೆ ಅಂತ ಗೊತ್ತಿಲ್ಲ". ಸುಮಾ ಉತ್ತರಿಸಿದಳು.

"ಹುಂ, ನಿನ್ನೆ ರಾಜಾರಾಯರನ್ನ ಕೇಳ್ದೆ ಸುಮ್ನೆ, ಐ. ಪಿ. ಸಿ. ಯ 302ನೇ ಕಲಮಿನ ಪ್ರಕಾರ, ಕೊಲೆ ಮಾಡಿದವರಿಗೆ. ಮರಣದಂಡನೆ ಅಥವಾ ಆಜೀವ ಕಾರಾಗೃಹ ದಂಡನೆ ಮತ್ತು ಜುಲ್ಮಾನೆ ಅಂತ ಹೇಳಿದ್ರು. ಎಂಥ ಘೋರ ಶಿಕ್ಷೆ ಅಲ್ವಾ ? ಏನೂ ಮಾಡದವರಿಗೆ ? ಇಲ್ಲಿ ಜೀವನ ಶುರು ಮಾಡೋ ಬದ್ಲು. ಜೈಲಿನಲ್ಲಿ ಸಂಸಾರ ಹಹಹ......ನೆನಸಿಕೊಂಡ್ರೆ...... ಹ್ಞುಹ್.

"ಐ ಆಮ್ ಸೋ ಸಾರೀ ದಯಾಕರ. ಇದೆಲ್ಲಾ ನನ್ನಿಂದಲೇ ಆಗಿದ್ದು ಅನಿಸುತ್ತೆ ನಂಗೆ. ನಾನು ಏನೂ ಮಾತಾಡದೇ ಸುಮ್ನೇ ಕೂತಿದ್ರೆ, ಇಷ್ಟೆಲ್ಲ ಆಗ್ತಿರಲಿಲ್ಲ."

"ಛೆ ಛೆ ಛೆ" ನಿನ್ನಿಂದ ಅಂತ ಯಾಕೆ ಅಂದುಕೊಳ್ತೀ, ಏನೇ ಆಗ ಬೇಕಾದ್ರೂ ಯಾರದೋ ಒಬ್ಬರ ಮೂಲಕ ಆಗುತ್ತೆ ಅಷ್ಟೇ. ಕೆಟ್ಟದ್ದಾಗಲೀ, ಒಳ್ಳೇದೇ ಆಗ್ಲಿ ಯಾರದ್ದಾದ್ರೂ ಒಬ್ಬರ ಹೆಸ್ರು ಹೇಳೋದು ನ್ಯಾಯ ಅಲ್ಲ ನಾನೇ ಪಾಪ ಅನಿಸಿ ಈ ಕೆಲಸ ಮಾಡೇ ಮಾಡ್ತಿದ್ದೀನೀ ಹೇಳ್ದೇ ಇದ್ರು".

"ಹೋಗ್ಲಿ ಬಿಡಿ, ಎಷ್ಟು ಮಾತಾಡಿದ್ರೂ ಆ ದಿನ ಈಗ ಹಿಂತಿರುಗಿ ಬರಲ್ಲ. ನಮ್ಮ ತಪ್ಪು ಸರಿ ಮಾಡ್ಕೊಳೋಕೆ ಆಗಲ್ಲಾ. ಒಂದು ಪಕ್ಷ ನಾವೇ ಕೊಲೆಗಾರರು ಅಂತಲೇ ಪ್ರಮಾಣೀಕರಿಸಿದರೆ, ಮರಣ ದಂಡನೆಯೇ ಕೊಡಿ ಅಂತ ಬೇಡಿಕೊಳ್ಳೋಣ. ಇಬ್ರೂ ಒಟ್ಟಿಗೇ ನೇಣುಗಂಬ ಏರಿ,

ಕಣ್ಣಿಗೆ ಕಾಣದ ಆ ಇನ್ನೊಂದು ಜನ್ಮದಲ್ಲಿ ನಮ್ಮ ಹೊಸ ಸಂಸಾರ ಶುರು ಹಚ್ಕೋಣ ಅಷ್ಟೇ ಅಲ್ವಾ ?" ತಲೆಗೆ ಕೈ ಹೊತ್ತು ಕುಳಿತ ಸುಮಾ ಶುಷ್ಕ ಕಲೆಯಲ್ಲೇ ತನ್ನ ಅನಿಸಿಕೆಯನ್ನು ಅವನ ಮುಂದೆ ಉದುರಿಸಿದಳು. "ಕರೆಕ್ಟ್ ಹೂಂ, ಈಗ ಹೊರಗೆ ಹೋಗೋದು ಬೇಡ್ವಾ ? ಹಾಗಾದ್ರೆ ನಾನು ಗುರು ರಾಜ್ ಹತ್ರ ಹೋಗ್ಬರ್ತೀನಿ. ಅವರ್ಜೊತೆ ಮಾತಾಡಿದ್ರೇ ಮನಸ್ಸಿಗೆ ಎಷ್ಟೋ ಹಗುರ ಆಗುತ್ತೆ" ಎನ್ನುತ್ತಾ ಮೇಲೆದ್ದ ದಯಾಕರ ದಾಪುಗಾಲು ಹಾಕಿ ಹೊರನಡೆದ.

ಘಟನೆ ನಡೆದ ಮೇಲೆ, 3 ತಿಂಗಳು ಒಂದೇ ಸಮನೆ ವಿಚಾರಣೆಗಳು ನಡೆದು ಮೇಲಿನ ಘಟನೆ, ಕೋರ್ಟಿನಲ್ಲಿ ಟ್ರಯಲ್ ನಡೆಸುವ ದಿನ ಬಂದಿತು. ಆ ದಿನ 11 ಘಂಟೆಗೆ ಹಿಯರಿಂಗ್ ಇತ್ತು, ಆದರೆ 11 $\frac{1}{2}$ ಆಯ್ತು. ಹನ್ನೆರಡೂ ಆಯ್ತು. ಆದರೂ ಬರಬೇಕಾದ ನ್ಯಾಯಾಧೀಶ, ದಯಾಳುವರ್ಮಾ ಕೋರ್ಟಿಗೆ ಬರಲಿಲ್ಲಾ. ಹನ್ನೆರಡೂ ಕಾಲು ಘಂಟೆಗೆ ನ್ಯಾಯಾಧೀಶರ ಮನೆಯಿಂದ ಬಂದದ್ದು ಆಕಸ್ಮಿಕ ಸುದ್ದಿ. ಕೋರ್ಟಿಗೆಂದು ಹೊರಟು ಮೆಟ್ಟಿಲಿಳಿದ ನ್ಯಾಯಾಧೀಶರಿಗೆ ಧಿಡೀರನೇ ಹಾರ್ಟ್ ಟ್ರಬಲ್ ಶುರುವಾದ್ದರಿಂದ ಬರಲಾಗಲ್ಲ ಎನ್ನುವ ಸಂದೇಶ, ಪರಿಣಾಮ ಹಿಯರಿಂಗ್ ಮುಂದಿನ ವಾರಕ್ಕೆ ಅಡ್ಜರ್ನ್ ಆಯ್ತು ಮುಂದಿನ ವಾರವೂ ಇಂಥದೇ ಇನ್ನೊಂದು ಕಾರಣ ಕೇಸ್ ಸ್ಟಡಿ ಮಾಡಿ ಆರೋಗ್ಯ ಮಾಡಬೇಕಾದ ಪಿ. ಪಿ. ಗೆ (ಪಬ್ಲಿಕ್ ಪ್ರಾಸಿಕ್ಯೂಟರ್) ಹುಶಾರಿಲ್ಲ, ಮತ್ತೆ ಅದರ ಮುಂದಿನ ವಾರಕ್ಕೆ ಕೇಸ್ ಹಿಯರಿಂಗ್ ಅಡ್‌ಜರ್ನ್ಡ್.

ಆದಷ್ಟು ಬೇಗ ಬಿಡುಗಡೆ ಬಯಸಿದ ನಿರಪರಾಧಿ ಗುಂಪಿಗೆ ಒಂದು ರೀತಿಯ ಮನೋ ಒತ್ತಡ. ಪೂರ್ತಿ ಸೆರೆವಾಸವೂ ಅಲ್ಲ, ಬಿಡುಗಡೆಯೂ ಅಲ್ಲ. ಈ ಪ್ರಕರಣಕ್ಕೆ ತೊಡಕಿಕೊಂಡ ಸಮಸ್ಯೆಗಳನ್ನು ಬಿಡಿಸುವ ಗಡಿಬಿಡಿಯಲ್ಲಿ ತಮ್ಮ ಪ್ರವಾಸ ಕಾರ್ಯಕ್ರಮಗಳನ್ನು ಇನ್ನೊಮ್ಮೆ ಯೋಜಿಸವ ಪುರಸೊತ್ತು ಇಲ್ಲ, ವ್ಯವಧಾನವೂ ಇಲ್ಲ.

ಸುಮಾ ದಯಾಕರನ ತಲೆ ಕೆಟ್ಟು, ಮನಸ್ಸು ಬಿಟ್ಟು ಹಿಡಿದಂತಾತ್ತು. ಪ್ರವಾಸ ಕಾರ್ಯಕ್ರಮಗಳಿರಲಿ, ಹೊಸದಾಗಿ ಮದುವೆಯಾದವರಾದರೂ

ಗಂಡ–ಹೆಂಡತಿಯರ ನಡುವೆ ಓಲಾಡಬೇಕಾಗಿದ್ದ ರೋಮಾಂಚಕತೆಯೂ ರೋಸಿ ದೂರ ನಿಂತಿತ್ತು. ಸುಮನಾ ಅಂತೂ ಈಗ ಸಂಪೂರ್ಣ ಅಂತ ರ್ಮುಖಿ, ಎಲ್ಲಾದರಲ್ಲೂ ನಿರಾಸಕ್ತಿ; ಕಾರಣ, ಅವಳ ಕಿವಿಗೆ ಬಿದ್ದ ಗುಸು ದೂರು. ಅವಳ ಕಾಲ್ಗುಣ ಅವರ ಮನೆಯ ಸುಖಕ್ಕೆ ಕಳಂಕ ಹಚ್ಚಿದೆ ಎನ್ನುವ ಇನ್ನೊಂದು ದೂಷಣೆ.

ಸುಮಾಳ ಮೌನ ನಡತೆಗೆ ಕಾರಣ ತಿಳಿಯದ ದಯಾಕರ, ಆ ದಿನ ಹವಾ ಬದಲಾವಣೆಗೆಂದು 'ಮನಃಶಾಂತಿ' ಹೋಟೆಲಿಗೆ ಅವಳನ್ನು ಕರೆ ದೊಯ್ದ. ಉಪಹಾರಕ್ಕೆ ಆದೇಶ ನೀಡಿ, ನೇರ ವಿಷಯಕ್ಕೆ ಇಳಿದ.

"ಸುಮಾ, ನಂಗೆ ಈ ಕಾಲ್ಗುಣಗಳ ಬಗ್ಗೆ, ಶಾಸ್ತ್ರಗಳ ಬಗ್ಗೆ ಯಾವ ನಂಬಿಕೆಯೂ ಇಲ್ಲ. ನೀನು ಎಜುಕೇಟೆಡ್ ಸೆನ್‌ಸಿಟಿವ್, ಆದ್ರೂ ಇದನ್ನೆಲ್ಲ ನಂಬ್ತೀಯಾ ಅಂದ್ರೆ, ನಂಗೆ ನಗು ಬರುತ್ತೆ"

"ಈಗ ನಂಬಿರೋದು ನಾನಲ್ಲ, ನಾನು ಬೇರೆಯವರ ಬಗ್ಗೆ ಹೇಳಿದ್ರೆ, ನಾನು ಅದ್ನ ನಂಬಿದೀನಿ ಅಂತ ಅರ್ಥ್ವಾ ಈ ದೂರು ಇನ್ನೊಬ್ರ ಮೇಲೆ ಬಂದಿದ್ರೆ, ಖಂಡಿತ ಈ ಭಾವನೆ ತಪ್ಪು ಅಂತ ವಾದಿಸಬಹುದಿತ್ತು. ಆದ್ರೆ ನಾನೇ ಎಲ್ಲದಕ್ಕೂ ಹೊಣೆ ಅಂತ ಬೇರೆಯವ್ರು ದೂರ್ತಾ ಇರುವಾಗ, ನಾನಲ್ಲ ಅಂತ ಎಷ್ಟು ಹೇಳಿಕೊಂಡ್ರೂ, ಆ ಪೋಲೀಸರ ಮುಂದೆ ಈಗ ನಾವು ಕೊಲೆಗಾರರಲ್ಲ ಅಂತ ಹೇಳಿಕೊಂಡ ಹಾಗೇನೇ ಯಾರು ನಂಬ್ತಾರೆ? ಬೇರೆಯವರ ಬಗ್ಗೆ ಈ ಮಾತು ಹೇಳಿದ್ರೆ, ನಾನು ಈ ಭಾವನೆ ತಪ್ಪು, ಹೀಗೆಲ್ಲಾ ನಂಬಬೇಡಿ ಎಂದೂ ಹೇಳಬಹುದು ವಾದಿಸಲೂಬಹುದು. ನನ್ನ ಬಗ್ಗೆಯೇ ಈ ಮಾತು ಹೇಳುವಾಗ ನಾನು ಈ ದೂರಿನಿಂದ ಪಾರಾಗೋದು ಹೇಗೆ ಅಂತ ಯೋಚ್ನೆ. ಅಥವಾ ಕೇಳಿಸಿಕೊಳ್ಳದವರ ಹಾಗೆ ಸುಮ್ಮನೆ ಇದ್ದುಬಿಡಬೇಕು ಅಷ್ಟೆ.

"ನಂಗೇನೋ ಇದೆಲ್ಲಾ ಬೇಜಾರು. ನಾನು ಇದಕ್ಕೆಲ್ಲಾ ಗಮನ ಕೊಡದೆ ಇದ್ರೂ, ಯಾರು ಏನೇ ಹೇಳ್ಲಿ ಸುಮ್ನೆ ಇದ್ದುಬಿಡು, ದಯಾಕರ ಹೇಳಿದ. ಆದ್ರೆ ಕೊರಗ್ತಾ ಅಲ್ಲಾ. ಆ ಮಾತುಗಳನ್ನ ಕೇರ್ ಮಾಡದೇ, ಈ ಅಮ್ಮಂಗೆ ಇನ್ಯಾರೋ ಅಕ್ಕಪಕ್ಕದವರು ಹೇಳಿರ್ತಾರೆ, ನಿಜ ಅಂದ್ಕೊಂಡು

ಚಿಂತಿಸ್ತಾಳೆ ಅಮ್ಮ. ಯು ನೀಡ್ ನಾಟ್‌ವರಿ. ಸಂತವಿಸುವ ದನಿಯಲ್ಲಿ ದಯಾಕರ ಹೇಳಿದ. ಫರ್‌ಗೆಟ್ ಇಟ್. ಈಗ ನಾವೇನು ಕೊಲೆಗಾರರು ಅಂತ ರುಜುವಾತು ಆಗೋದಿಲ್ಲ, ಇದು ಖಂಡಿತ ಎಂದು ನಮ್ಮ ಲಾಯರ್ ಹೇಳಿದಾರಲ್ಲ. ಅದ್ನ ಮತ್ತಬಿಡು. ಈಗ ತಿಂಡಿ ತಿನ್ನು, ಎಂದು ಬಟ್ಲರ್ ತಂದಿಟ್ಟ ತಿಂಡಿ ಪ್ಲೇಟ್ ಒಂದನ್ನು ಅವಳ ಮುಂದಿಟ್ಟು, ಅವಳನ್ನೇ ನೋಡಿದ. ಇವೊತ್ತು ಉಟ್ಟಿರೋ ಸೀರೆ ಹೊಸತಾ? ತುಂಬಾ ಚೆನ್ನಾಗಿದೆ" ಎಂದು ಹೊಗಳಿ, ವಿಷಯ ಮರೆಸಲು ಪ್ರಯತ್ನಿಸಿದ.

ಅವಳು ಹಿಂದಿನ ಮಾತನ್ನೇ ಮುಂದುವರಿಸಿದಳು. "ಹೂ ನಿಮ್ಮ ಅಮ್ಮನೇ ಅವರ ತಂಗಿಯ ಹತ್ತಿರ ಹೇಳ್ತಿದ್ರು, ಅವರು ಬಂದವರೆ ದಯಾ ಟೂರ್ ಹೋಗಲಿಲ್ವಾ ಅಂತ ಕೇಳ್ದಾಗ, "ಸುಮಾ ಬಂದದ್ದೇ ಶುರುವಾಯ್ತು ನೋಡು, ನಮ್ಮ ಮನೆತನಕ್ಕೇ ಮಸಿ ಹಚ್ಚೋ ವಿಷಯ ಇದು. ಎಲ್ಲಾದ್ರೂ ಆ ರಾಘವಪ್ಪ ಕಾನೂನು ತನ್ನದಾಗಿಸಿಕೊಂಡುಬಿಟ್ರೆ, ದಯಾಕರ ಜೈಲಿಗೇ ಹೋಗುವಂತಾಗಿಬಿಟ್ರೆ......ಎಲ್ಲಾ ಸುಳ್ಳುಗಳೂ ನಡೆಯುತ್ತಿರುವ ಹಾಗೇ ಅದೂ ನಡೆದೇಬಿಟ್ರೆ ಅಂತ ಭಯ" ಅಂತ ಹೇಳಿಕೊಂಡು ಅಳ್ತಾ ಇದ್ರು.

"ಛೆ, ಛೆ ಹಾಗೆಲ್ಲ ಏನೂ ಆಗಲ್ಲ ಅಂತ ಅಮ್ಮನಿಗೆ ನಾನೂ, ಅಪ್ಪನೂ ಎಷ್ಟು ಸಲ ಹೇಳಿದೀವಿ. ಆದ್ರೂ ಅವಳ ಭಯ ಕಡಿಮೆ ಆಗಿಲ್ಲ, ಇನ್ನೊಮ್ಮೆ ನೀನೂ ಅಮ್ಮನಿಗೆ ಹೇಳು ಏನೂ ಆಗಲ್ಲ ಅಂತ" ಎಂದು ತಿಂಡಿಯ ತಟ್ಟೆಗೆ ಕೈ ಹಾಕಿದ ದಯಾಕರ, ಸುಮಾ ಲೆಟ್ ಅಸ್ ಫಾರ್‌ಗೆಟ್ ಇಟ್. ಹಿಯರ್ ಈಗ ಸದ್ಯ ಅದೇ ಮಾತು ತೆಗೀಬೇಡ. ಯಾವಾಗ್ಲೂ ಕೊಲೆ, ಕಳ್ಳತನ ಅಂತ ಮಾತಾಡಿ, ಮಾತಾಡಿ ತಲೆ ಸುಟ್ಟು ಹೋಗಿದೆ, ಎನ್ನುತ್ತಾ ಆರಾಮ ವಾಗಿ ಕುರ್ಚಿಗೊರಗಿ ಒಂದು ಕ್ಷಣ ಸುಮ್ಮನೇ ಕೂತು, ಸುಮನಾಳನ್ನೊಮ್ಮೆ ಖುಷಿಯಿಂದ ನೋಡಿದ. ತುಂಬ ಸಿಂಪಲ್ ಆಗಿ ಡ್ರೆಸ್ ಮಾಡಿಕೊಂಡ ಸುಮನಾ ಕಪ್ಪಗಿದ್ದರೂ ಚೆನ್ನಾಗಿದ್ದಾಳೆ ಎನಿಸಿತು. ತೆಳುವಾದ ದೇಹ, ಹೆಚ್ಚು ಎತ್ತರವಿಲ್ಲದ ಆಳ್ತನ, ಆದರೂ ಎಷ್ಟೊಂದು ಲಕ್ಷಣ, ಎಷ್ಟು ಆಕ ರ್ಷಕ ಮುಖ ಎಂದುಕೊಳ್ಳುತ್ತಲೇ ಅವಳ ಬೆನ್ನ ಹಿಂದೆ ಓಲಾಡುತ್ತಿದ್ದ ಬಣ್ಣಬಣ್ಣದ ಹೂಗಿಡಗಳನ್ನು ನೋಡಿದ. ಆಮೇಲೆ ಹಾಗೇ ಹೋಟೆಲಿನ

ಸುತ್ತ ಕಣ್ಣಾಡಿಸಿದ. ಹೋಟೆಲ್ ಕಟ್ಟಡದ ಹೊರಗಿನ ಅಂದವಾದ ಕಿರುವನ ಅದು. ಆ ವನಕ್ಕೊಂದು ಕಾಂಪೌಂಡು. ಒಳಗೆ ಹೊಸ ಚಿಗುರುಗಳಿಂದ ನಳನಳಿಸುವ ಮರ–ಗಿಡಗಳು, ಆ ತಂಪು ತಂಗಾಳಿ, ಬಣ್ಣದ ಪಟ್ಟೆಯ ಛತ್ರಿಗಳು ಹಾಕಿದ ಆಹ್ಲಾದಕರ ವಾದ್ಯ ಎಲ್ಲ ಆವನ ಗಮನಕ್ಕೆ ಬಂತು. ಎಷ್ಟೋ ತಿಂಗಳಿಂದ ನಾವು ಈ ರಸಮಯ ವಾತಾವರಣದಿಂದ ಪೂರ್ತಿ ದೂರ ಹೋಗಿಬಿಟ್ಟಿದ್ದೇವೆಯೇ? ಎನಿಸಿತು. ಅಲ್ಲ ತಾವು ಹೋದುದಲ್ಲ, ಆದ್ಯಾರೋ ಸತ್ತ ಹುಡುಗ ತಮ್ಮನ್ನು ದೂರ ನೂಕಿದ್ದು ಎಂದು ಮತ್ತೆ ತಾನೇ ಹೇಳಿಕೊಂಡ.

"ಏನು ಯೋಚ್ನೆ ಮಾಡ್ತಾ ಇದೀರಾ ? ಇದು ಜೈಲಲ್ಲ, ವಕೀಲರ ಮನೆಯೂ ಅಲ್ಲ. ಕೋರ್ಟಿನ ಕಟಕಟೆಯೂ ಅಲ್ಲ ಅಂತ ಗೊತ್ತು ತಾನೇ ? ನಗುತ್ತ ಕೇಳಿದಳು, ಅವನ ಕಣ್ಣು ಓಡಾಡಿದಲ್ಲೆಲ್ಲ, ತನ್ನ ದೃಷ್ಟಿಯನ್ನೂ ಹಿಂದೆ ಹರಿಬಿಟ್ಟ ಸುಮಾನಾ.

ಜೋರಾಗಿ ನಕ್ಕ ದಯಾಕರ, "ಸದ್ಯ ಆ ಬಗ್ಗೆ ಖಂಡಿತಾ ಯೋಚಿಸ್ತಾ ಇಲ್ಲ. ನೀನು ಹಿಂದಿನ ಆ ಬಣ್ಣದ ಹೂಗಳು, ಈ ಮಿನಿ ತೋಟ, ರಂಗುರಂಗಿನ ಈ ಛತ್ರಿಗಳು ಎಲ್ಲ ಎಷ್ಟು ಚೆನ್ನಾಗಿದೆ ಅನಿಸ್ತಾ, ಇದೆ ಗೊತ್ತಾ ? ಇಷ್ಟು ದಿನ ಯಾಕೆ ಈ ಸುತ್ತಲಿನ ಸೊಬಗಿನ ಕಡೆ ಗಮನವೇ ಕೊಡಲಿಲ್ಲ ಅನಿಸುತ್ತೆ ಇವೊತ್ತು ನಿಂಜೊತೆ ಮಾತಾಡೋಕೆ ಎಷ್ಟು ಖುಷಿ ಆಗ್ತಾ ಇದೆ ಗೊತ್ತಾ ಈ ವಾತಾವರಣದಲ್ಲಿ ಸುಮಾ".

ಸುಮ್ಮನೆ ನಕ್ಕಳು ಸುಮಾನ, ಎಷ್ಟು ಚೆನ್ನಾದ ನಗು ಎಂದುಕೊಂಡ ಅವನು. ಅವಳು ನಗುತ್ತಲೇ ಹೇಳಿದಳು "ಹೂಂ, ಅಂತೂ ಈ ತೋಟ, ಗಿಡ, ಛತ್ರಿಗಳ ಹಾಗೆ ನಾನೂ ಒಂದು ನಿರ್ಜೀವ ವಸ್ತು ಅಂದ ಹಾಗಾಯ್ತು ಅಲ್ವಾ"?

ಛೆ ಛೆ ಎಂದು ದಯಾಕರ ಏನೋ ಹೇಳಲು ಬಾಯಿ ತೆರೆದಾಗಲೇ,

"ನಮಸ್ಕಾರ ಸಾರ್" ಎನ್ನುತ್ತಾ ಅಲ್ಲಿಗೆ ಬಂದ ರಾಚಾರಾಯರ ಸಹಾಯಕ ಕೈ ತೋರಿಸಿದರೂ ಕೂಡದೇ, ನಿಂತೇ ಹೇಳಿದ, "ಯಾರೋ ಪಿ. ಆರ್. ಮುರುಕಿನ ಮನಿ ಅನ್ನೋವ್ರು ಬಂದಿದಾರಂತೆ ನಮ್ಮ ಗುರುಗಳ

ಮನೆಗೆ. ಈಗಾಗಲೇ ನಿಮ್ಮನ್ನು ಅವರೊಮ್ಮೆ ನೋಡಬೇಕಂತೆ ನಿಮ್ಮನೆಗೆ ಹೋಗಿದ್ದೆ, "ಮನಃಶಾಂತಿ"ಗೆ ಹೋಗಿದ್ದಾರೆ, ಅಲ್ಲಿ ಸಿಗ್ತಾರೆ ಅಂದ್ರು, ಇಲ್ಲಿಗೇ ಬಂದೆ. ಸಾರಿ ಫಾರ್ ಡಿಸ್‌ಟರ್‌ಬಿಂಗ್ ಯು. ನಾನೀಗ ನನ್ನ ಮನೆಗೆ ಹೋಗ್ತಿದೀನಿ, ನಿವು ರಾಜಾರಾಯರನ್ನು ಕಾಣಲು ಹೋಗಿ ಬನ್ನಿ" ಎಂದು ಕೈ ಆಡಿಸಿ ಹೊರಟು ಹೋದ.

ರಾಜಾರಾಯರ ಈ ಸಂದೇಶ, ಸುಮನ ದಯಾಕರರನ್ನು ಕೂಡಲೇ ಮನಃಶಾಂತಿಯಿಂದ ಹೊರಗೆ ನೂಕಿತ್ತು. ಇಬ್ಬರೂ ಅವಸರದಲ್ಲಿ ತಿಂಡಿ ಮುಗಿಸಿ ಮೇಲೆದ್ದರು.

"ಅಬ್ಬಬ್ಬ, ಆ ರಾತ್ರಿ ಕಣ್ಮುಂಚಿನ ದೃಷ್ಟಿಗೆ ತಾಕಿದ ಆ ದೇಹ ತಮ್ಮ ಹಿಂದಿನ ಜೀವನದ ಸಮಾಧಾನವನ್ನೆ ಹೊಸಕಿ ಹಾಕಿದುದಲ್ಲದೇ, ನವ ಸಂಸಾರಿಗರಿಗೆ ನೂರಾರು ಉಲ್ಲಾಸದ ಅನುಭವ ನೀಡಲು ನಗುತ್ತ ನಿಂತ ವಸಂತ ಋತುವಿನ ಆಹ್ಲಾದದ ಕಡೆ ಕಣ್ಣು ತಿರುಗಿಸುವಂತೆ ಜಿಗುಪ್ಸೆಯ ಹೊರೆ ಹೊತ್ತು ಹಾಕಿದೆಯಲ್ಲ" ಎಂದು ದಯಾಕರ ನೂರೊಂದನೆಯ ಬಾರಿ ಅಂದುಕೊಂಡ.

"ಇವೊತ್ತು ಅರ್ಥ ಆಯ್ತು ನಂಗೆ, ಮನುಷ್ಯ ಬದುಕಿದಾಗಿನಗಿಂತ ಸತ್ತ ಮೇಲೆ ಭಯಂಕರ ಅರಿತ. ಬದುಕಿದಾಗ ಕೊಡುವುದಕ್ಕಿಂತ ಹೆಚ್ಚಿನ ಕಷ್ಟವನ್ನು ಸತ್ತುಕೊಡುತ್ತಾನೆ ಅಂತ" ದಯಾಕರ ಹೇಳಿದ ದಾರಿಯಲ್ಲಿ.

"ಅಥ್ವಾ......ಇದು ಬದುಕಿದಾಗಲೂ ಇನ್ನೊಬ್ಬರಿಗೆ ಕಿರುಕುಳ ಕೊಡುವ ವಂಶ. ಅಸ್ತಿತ್ವ ಕಳೆಕೊಂಡ ಮೇಲೂ ಕಷ್ಟ ಕೊಡುತ್ತೆ ಅನ್ನಿ. ಬದುಕಿರುವ ಅಪ್ಪನಿಗೆ ಸತ್ತ ಮಗನ ಸಹಾಯ ಇದು, ಹಣ ಎಳೆಯುವ ಸಂಚಿಗೆ ದಾರಿ ಮಾಡಿಕೊಡುವ ನಾವು" ಸುಮನಾ ಹಲ್ಲು ಕಚ್ಚಿ ನುಡಿದಳು, ರಾಘವಪ್ಪ ಮುರುಕಿನಮನಿ ಮತ್ತು ಸುರೇಶರ ಮೂಲ ತಿಳಿಯದೇ.

ಹಿಯರಿಂಗನ ದಿನ ದಯಾಕರ್ ದಂಪತಿಗಳು ಕೊಲೆಗಡುಕರು, ಕಳ್ಳರು ಎಂದು ಪ್ರಮಾಣಿಸಲು ಪೋಲೀಸರು ತಮ್ಮ ಚಾರ್ಜ್ ಷೀಟ್ ಜೊತೆಗೆ ಈ ಕೆಳಗಿನ ವರದಿ ಮತ್ತು ಸಾಕ್ಷಿಗಳನ್ನು ಸಂಗ್ರಹಿಸಿದ್ದರು.

1. ದಯಾಕರ ಮತ್ತು ಅವನ ಹೆಂಡತಿಯ ಅನುಮಾನಾಸ್ಪದ ನಡತೆ, ಹೆಣಬಿದ್ದ ಜಾಗವನ್ನು ತೋರಿಸದೇ ಇನ್ನೊಂದು ಜಾಗ ತೋರಿಸುವ ಸಂಚು ಹಾಕಿ ಮನೆಯ ವಿಳಾಸವನ್ನು ಹೇಳಲು ಹಿಂಜರಿದು, ಆಮೇಲೆ ಯಾವ ಭಯಕ್ಕೋ ನಿಜವಾದ ಜಾಗ ತೋರಿಸಿದರೆಂಬ ಹೇಳಿಕೆಯ ಜೊತೆಗೆ. ಹೆಣ ಬಿದ್ದಲ್ಲಿ ಏನೂ ಕಾಣದ ಹಾಗೆ ನೀರು ಸುರಿದಿದ್ದಾರೆ ಎಂಬ ಪೋಲೀಸರ ಹೇಳಿಕೆ.

2. ದೊಡ್ಡಪ್ಪನ ಮಗನ ಕಾರನ್ನು, ಅದೂ ಮಧುಚಂದ್ರಕ್ಕೆ ಹೊರಟ ಜೋಡಿ, ಯಾವುದೋ ಅಪರಿಚಿತ ರೋಗಿಯೊಬ್ಬನನ್ನು ಆಸ್ಪತ್ರೆಗೆ ಸೇರಿಸುವ ಸಹಾಯಕ್ಕಾಗಿ ಉಪಯೋಗಿಸಿದೆ, ಎಂಬ ಸುಳ್ಳು ಹೇಳಿಕೆ ನೀಡಿ, 10,000ರೂ. ಕಳ್ಳತನ ಮಾಡಿದ್ದಾರೆ ಎಂದು ಆಪಾದಿಸಿ 35,000ರೂ.ನ ಪರಿಹಾರವೂ ಕೇಳಿರುವ ರಾಘವಪ್ಪನ ಅರ್ಜಿ.

3. ಸತ್ತವನ ದೇಹ ಪರಿಶೀಲನೆ ಮಾಡಿದ ಪ್ರಕಾರ, ಅವನಿಗೆ ಶೇಕಡ 1 ರಷ್ಟು ಫಿಟ್ಸ್ ಇತ್ತು ಎನ್ನುವ ಸುಳಿವು ಕಂಡು ಬಂದರೂ, ಈ ಫಿಟ್ಸ್‌ನಿಂದ ಸಾವು ಬಂದಿಲ್ಲವೆಂದೂ. ಮೇಲೆ ಗಾಯವಿಲ್ಲದೇ ಒಳ ತಲೆಗೆ ತಟ್ಟಿರುವ ತೀವ್ರ ಪೆಟ್ಟೇ ಸಾವಿಗೆ ಕಾರಣ ಎನ್ನುವ ದ್ವಂದಾರ್ಥವುಳ್ಳ ಡಾ॥ಚಿದಾನಂದರ ವರದಿ ಮತ್ತು ಮೂರ್ಛೆ ರೋಗ ಬಂದು ಬಿದ್ದಿಲ್ಲ. ಹಾಗೆ ರಪ್ಪನೆ ಬೀಳುವಷ್ಟು ಅಂಶ ಖಾಯಿಲೆ ಇಲ್ಲ ಎನ್ನುವ ಅವರದೇ ಹೇಳಿಕೆ.

4. ತಾನು ಆ ದಿನ ಹಣ ವಾಪಸ್ ಪಡೆಯಲು ಫೋನ್ ಮಾಡಿದುದಾಗಿಯೂ ರಾಘವಪ್ಪ, ಯಾವಾಗಲೂ ಹೇಳುವಂತೆ, "ಖಂಡಿತ ಇವೊತ್ತು ಕಳಿಸಿಕೊಡುತ್ತೇನೆ" ಎಂದು ತಿಳಿಸಿದುದಾಗಿಯೂ, ಆದರೆ ಆ ಹುಡುಗ ಬರಲೇ ಇಲ್ಲವೆಂದೂ ಹೇಳಿಕೆ ನೀಡುವ ವ್ಯಾಪಾರಿ ರಾಮಪ್ಪನ ಸಾಕ್ಷಿ.

5. ಹಿಂದೊಮ್ಮೆ ತನ್ನ ಹಣ ಹಾರಿಸಿ, ಇದೇ ರೀತಿ ವರ್ತಿಸಿದ್ದ ಎಂದು ಪ್ರಮಾಣ ಮಾಡಲು ನಿಂತ ಜಾರ್ಜ್,

6. ರಾಘವಪ್ಪ ಸುಳ್ಳು ಹೇಳುವವನಲ್ಲ, ಅವನ ಮಗನಿಗೆ ಫಿಟ್ ಇರಲಿಲ್ಲ, ನಾನು ಅವರನ್ನು ಹತ್ತು ವರ್ಷಗಳಿಂದ ಬಲ್ಲೆ, ನನಗೆ ತಿಳಿದ ಮಟ್ಟಿಗೆ ಅವರು ತುಂಬಾ ಒಳ್ಳೆಯ ಮನುಷ್ಯರೇ ಎನ್ನುವ ಭಾವಾರ್ಥ

ನೀಡಲು ಬಂದ ಇಬ್ಬರು ಸಂಬಂಧಿಗಳು, ಅವರಲ್ಲಿ ಒಬ್ಬ ಪೋಲೀಸ್ ಪೇದೆ ಹರಿಶ್ಚಂದ್ರ.

7. ದಯಾಕರನ ಮನೆಯವರು ಯಾರೊಂದಿಗೂ ಸ್ನೇಹ ಬೆಳೆಸುವವರಲ್ಲ. ಹೇಳಿಕೊಳ್ಳುವಂಥ ಶ್ರೀಮಂತಿಕೆ ಇಲ್ಲದಿದ್ದರೂ, ಶ್ರೀಮಂತರೆನ್ನುವಂಥ ಜಂಭದಿಂದ ಯಾರೊಡನೆಯೂ ಬೆರೆಯದೇ ತಮ್ಮ ಪಾಡಿಗೆ ತಾವಿರುವವರು. ಮನೆಯ ಹೊರಗೆ ಅವರು ಕಾಣಿಸಿಕೊಳ್ಳುವುದೇ ಅಪರೂಪ. ಆದ್ದರಿಂದ ಅವರ ಸ್ವಭಾವಗಳ ಬಗ್ಗೆ, ಗುಣ ನಡತೆಗಳ ಬಗ್ಗೆ ಅವರ ಪಕ್ಕದ ಮನೆಯವರೇ ಆದ ತಮಗೆ ಏನೂ ತಿಳಿದಿಲ್ಲ ಎಂಬುದನ್ನು ಸ್ಪಷ್ಟಪಡಿಸಲು ಬಂದ ದಯಾಕರನ ನೆರೆಯವ ಅನಂತಪ್ಪ.

8. ದಯಾಕರ ಮತ್ತು ಸುರೇಶ, ತನ್ನ ಹೋಟೆಲಿನಲ್ಲಿ ಕಾಫಿ ಕುಡಿದು, ಒಟ್ಟಿಗೇ ಹೊರಹೋದುದನ್ನು ಗಮನಿಸಿದಂತೆ, ಸುರೇಶನ ಬಳಿ 10,000 ರೂ. ಹಣ ಇದ್ದುದನ್ನು ಹೋಟೇಲಿನಲ್ಲಿ ಬೀಳಿಸಿಕೊಂಡದ್ದನ್ನು ನೋಡಿದಂತೆ ವರ್ಣಿಸಲು ಬಂದ ವಿಶ್ವಾಸ್ ಹೋಟೆಲ್‌ನ ಮಾಲೀಕ, ಸುಶೀಲ ನಗರದ ಹದಿನಾಲ್ಕನೇ ಬ್ಲಾಕಿನ ಹೋಟೆಲ್ ಓನರ್.

9. "ದಯಾಕರ ತುಂಬಾ ಮುಂಗೋಪಿ, ಬಲು ಬೇಗ ಕೋಪವನ್ನು ಮೈತುಂಬ ಹರಿದಾಡಿಸಿಕೊಂಡುಬಿಡುವ ಸ್ವಭಾವದವ. ಆಮೇಲೆ ಮನಸ್ಸಿನಲ್ಲಿ ಏನು ಬದಲಾವಣೆಯಾಗುತ್ತೋ ತಿಳಿಯದು. ಒಳ್ಳೆಯತನವಿದ್ದರೂ ಇರಬಹುದು, ಆದರೆ ಕೋಪಕ್ಕೆ ತುತ್ತಾದಾಗ ಮಾತ್ರ ಯಾರಿಗೇ ಆದ್ರೂ ಮುಖ ಮೂತಿ ನೋಡದೇ ಬಾಯಿಗೆ ಬಂದ ಹಾಗ ಅನ್ನುತ್ತಾನೆ. ಏನಾದರೂ ಮಾಡಿದರೂ ಮಾಡಿಬಿಡಬಹುದು, ಆ ಕ್ಷಣದಲ್ಲಿ ಎಂದು ತಿಳಿಸಲು ನಿಂತವ, ದಯಾಕರನ ಜೊತೆ ಕೆಲಸ ಮಾಡುವ ಬ್ಯಾಂಕಿನ ಒಬ್ಬ ಕಾರಕೂನ.

ನೆರೆಮನೆ ಅನಂತಪ್ಪ ಮತ್ತು ಬ್ಯಾಂಕಿನ ಕಾರಕೂನ ಇಬ್ಬರು ಬಿಟ್ಟರೆ ಉಳಿದ ಎಲ್ಲರ ಹೇಳಿಕೆಗಳೂ ಸುಳ್ಳು, ದಯಾಕರ ಮತ್ತು ಸುಮನಾರ ಪ್ರಕಾರ, ನಿಜವನ್ನೇ ಹೇಳಿ ರಾಘವಪ್ಪ ಮುರುಕಿನ ಮನಿಯ ಆರೋಪಕ್ಕೆ ಪುಷ್ಟಿ ನೀಡಹೊರಟ ಸಾಕ್ಷಿಗಳು ಇವೆರಡು. ಆದರೆ ವಿಶ್ವಾಸದ ಮೂಲಕ, ಹರಿಶ್ಚಂದ್ರ ಇತ್ಯಾದಿಗಳೆಲ್ಲ? ಸತ್ಯವನ್ನು ಮಲಗಿಸಿ ಅದರ ಮೇಲೆ ಅಂದವಾದ

ಸುಳ್ಳಿನ ಕೋಟೆ ಕಟ್ಟಲು ಸಿದ್ಧರಾಗಿ ನಿಂತ ವ್ಯಕ್ತಿಗಳೇ? ಅದೂ, ಈ ಎಲ್ಲಾ ಸಾಕ್ಷಿಗಳು ಹುಟ್ಟಿ ಬೆಳೆದದ್ದು ಒಂದೇ ಒಂದು ತಿಂಗಳಲ್ಲಿ. ಹುಂ, ದುಡ್ಡು ಮತ್ತು ಸುಳ್ಳು, ಇವೆರಡನ್ನೂ ಮೆಚ್ಚಿಕೊಂಡವರಿಗೆ ಯಾವತ್ತೂ ಧೈರ್ಯ ಜಾಸ್ತಿ. ಆದರೆ ಅದೇ ಸತ್ಯದ ಸ್ನೇಹಿತರಿಗೆ ಅಷ್ಟೊಂದು ಧೈರ್ಯವಿರಲ್ಲ. ನಿಜ ನಿಜವೇ ಎಂದು ತಿಳಿದರೂ ಹೇಳಲು ಹಿಂಜರಿಯುವ ಜನರೂ ಬೇಕಾದಷ್ಟು ಇರುವಾಗ, ಅದನ್ನು ನೋಡದೇ ಅಥವಾ ಮನಸ್ಸಿಗೆ ಸ್ಪಷ್ಟವಾಗದೇ ಅವರು ಎಂದೂ ಸಾಕ್ಷಿ ಹೇಳುವ ಸಾಹಸ ಮಾಡುವುದಿಲ್ಲ. ಏನೂ ಸಂಬಂಧವಿಲ್ಲದೇ ಗಳಿಕೆಯೂ ಇಲ್ಲದೇ ಕೋರ್ಟಿಗೆ ಓಡಾಡುವ ತೊಂದರೆಗೆ ಒಳಪಡುವವರು ತೀರ ವಿರಳ. ದುಡ್ಡೂ ಬೇಡ, ಆ ತೊಂದರೆಯೂ ಬೇಡ ಎನ್ನುವ ಹಲವರು ಯಾವ ತಂಟೆಗೂ ಬರದೇ, ಕೇಳಿದ ಪ್ರಶ್ನೆಗೆಲ್ಲ, "ಗೊತ್ತಿಲ್ಲಪ್ಪ ನಮಗೇನೂ ಗೊತ್ತಿಲ್ಲ" ಎಂದು ಎಲ್ಲ ಪ್ರಶ್ನೆಗಳಿಂದ ದೂರ ಸರಿದು ನಿಂತರು. ಇವರಲ್ಲಿ ಸಾಕ್ಷಿ ಹೇಳಲು ಒಪ್ಪಿಕೊಳ್ಳದಿದ್ದವರೆಂದರೆ, ಘಟನೆಯ ಆರಂಭ ಅರಿತ ಗುರುರಾಜರ ಸ್ನೇಹಿತರೂ ಒಬ್ಬರು. ಅವರೇ ಏಕೆ, ದಯಾಕರನ ಸ್ನೇಹಿತರಾಗಲೀ, ಬ್ಯಾಂಕಿನಲ್ಲಿ ಕೆಲಸ ಮಾಡುವ ಇತರರಾಗಲೀ, ಸಂಬಂಧಿಗಳಾಗಲೀ ಯಾರೂ ಸುಳ್ಳು, ನಿಜಗಳ ಬಗ್ಗೆ ಇರಲಿ, ದಯಾಕರನ ಹವ್ಯಾಸ, ಪ್ರಕೃತಿ ಇತ್ಯಾದಿಗಳ ಬಗ್ಗೆ ಕೂಡ ಒಂದೇ ಒಂದು ಅಕ್ಷರವೂ ಬಾಯಿ ಬಿಡಲಿಲ್ಲ. ಯಾವ ಅಕ್ಷರ ಹೊರ ಉರುಳಿದರೆ, ತಮ್ಮನ್ನು ಸಾಕ್ಷಿಯಾಗಿ ನಿಲ್ಲುವಂತೆ ಎಲ್ಲಿ ಕರೆದುಬಿಡುತ್ತಾರೋ ಎನ್ನುವ ಭಯ ಇದಕ್ಕೆ ಒಂದು ಕಾರಣವಾದರೆ, ಮುಂಗೋಪಿ ದಯಾಕರ ನಿಜವಾಗಲೂ ಕಳ್ಳತನ ಅಥವಾ ಕೊಲೆ ಮಾಡುವ ಪ್ರಯತ್ನವಾದರೂ ಮಾಡಿರಬಹುದೇ ಎನ್ನುವ ಅಲ್ಪ ಅನುಮಾನ ಇನ್ನೊಂದು ಕಾರಣ.

ಈಗ ವಕೀಲ ರಾಘುರಾಯರು ಮುಖ್ಯವಲ್ಲದ ತಮ್ಮ ಕೆಲವು ಕೇಸುಗಳನ್ನು ಬದಿಗಿಟ್ಟು, ಈ ಪ್ರಕರಣದ ಬಗ್ಗೆ ಆಸಕ್ತಿ ವಹಿಸಿದ್ದರು. ತಾನಾಗಿಯೇ ಕೇಸ್ ಅಡ್‌ಜರ್ನ್ ಆಗುತ್ತಿದುದರಿಂದ, ಅವರಿಗೂ ಸಮಯಾವಕಾಶ ಸಿಕ್ಕಿತ್ತು. ಘಟನೆ ನಡೆದ ದಿನ ದಯಾಕರ, ಸುಮನಾರಿಗಿಂತ ಮೊದಲು ಆ ಸ್ಥಳದಲ್ಲಿದ್ದ ಗುರುರಾಜ್ ಮತ್ತವರ ಸಹೋದ್ಯೋಗಿಗಳ ಸಾಕ್ಷಿ ಅಲ್ಲದೇ,

ದಯಾಕರ ಕೆಲಸ ಮಾಡುತ್ತಿದ್ದ ಬ್ಯಾಂಕಿನ ಮ್ಯಾನೇಜರರ ಮೂಲಕ, ದಯಾಕರ ಹೊಸದಾಗಿ ಮದುವೆಯಾದ ವಿಷಯ, ರಜಾ ವಿವರಣೆ, ತೆಗೆದುಕೊಂಡ ಎಲ್.ಟಿ.ಸಿ. ಇತ್ಯಾದಿಗಳ ಬಗ್ಗೆ ನಿಜ ಮಾಹಿತಿ ಪಡೆದುಕೊಂಡರು. ಕೊಲೆ ಮಾಡಿಲ್ಲ, ಎನ್ನಲು ಯಾವ ಲಿಖಿತ ದಾಖಲೆಗಳು ಇಲ್ಲದಿದ್ದರೂ, ತನ್ನ ನಂಬಿಕಾರ್ಹ ನೌಕರನಾದ ದಯಾಕರ, ಕೇವಲ 10,000 ರೂ.ಗಾಗಿ ಕೊಲೆ ಮಾಡುವಷ್ಟು ನೀಚನಲ್ಲ ಎನ್ನುವುದಕ್ಕೆ, ಅವನ ಬ್ಯಾಂಕಿನ ಮ್ಯಾನೇಜರ್ ಶ್ಯಾಮರಾವ್ ಸಾಕ್ಷಿ ಹೇಳಲು ಒಪ್ಪಿಕೊಂಡರು, ದಯಾಕರ ಸಾಕಷ್ಟು ಬೇಡಿಕೊಂಡ ಮೇಲೆ.

ಇದಾದ ನಂತರ, ರಾಜಾರಾಯರು ಅರಂಭಿಸಿದ್ದು ರಾಘವಪ್ಪನ ಮನೆಯ ಬಳಿ ಸಾಕ್ಷಿಗಾಗಿ ಬೇಟೆ. "ರಾಘವಪ್ಪ ಈಗಿರುವ ಮನೆಗೆ ಬರುವ ಮೊದಲು ಸುಶೀಲ ನಗರದ ಮಾರುಕಟ್ಟೆಯ ಹತ್ತಿರ ಯಾವುದೋ ಮನೆಯಲ್ಲಿದ್ದರಂತೆ ಇಲ್ಲಿಗೆ ಬಂದು ಮೂರೇ ತಿಂಗಳಾದದ್ದು ಎಂದು ಕೃಷ್ಣಾ ನಗರದಲ್ಲಿರುವ ಮನೆಯ ಮಾಲೀಕ ಹೇಳಿದ್ದ. ಉಳಿದವರಿಗೆ ರಾಘವಪ್ಪನ ವಿಷಯವೇ ತಿಳಿದಿರಲಿಲ್ಲಾ.

ಈ ಸುಶೀಲ ನಗರದ ಮಾರುಕಟ್ಟೆ ವಿಸ್ತೀರ್ಣ ಏನು ಚಿಕ್ಕದೇ ? ಹತ್ತಾರು ಮೈಲಿಗಳ ಅಳತೆಯದು. ಈ ಮಾರ್ಕೆಟಿನ ಬಳಿ ಎಲ್ಲಿದ್ದ ಎಂದು ಕಂಡುಹಿಡಿಯುವುದು ಹೇಗೆ ? ಸುಶೀಲ ನಗರದ ಮಾರುಕಟ್ಟೆಯ ಬಳಿ ಇಂಥ ಎಷ್ಟು ರಾಘವಪ್ಪಗಳೋ ? ರಾಘವಪ್ಪರಿಗಂತೂ ಎಷ್ಟು ಸಲ ಕೇಳಿದರೂ, ಎಷ್ಟು ಪ್ರಶ್ನೆ ಕೇಳಿದರೂ ಸಿಕ್ಕಿಹಾಕಿಕೊಳ್ಳದಂಥ ಸುಳ್ಳಿನ ಉತ್ತರಗಳನ್ನು ಕೊಡುತ್ತಾನೆನಿಸಿತು ರಾಜಾರಾಯರಿಗೆ "ಛೆ ಬಲವಂತಿಸಿದರೆ ಇವನ ಬಾಯಿಂದ ಬರುವುದು ಬರೀ ಬೊಕಳೆಗಳ ಬಾಲ" ಎಂದುಕೊಂಡ ರಾಜಾರಾಯರು ಬೇರೆ ಉಪಾಯದ ಬಗ್ಗೆ ಯೋಚಿಸಿದರು.

ದಯಾಕರ, ವಸಂತರಾವ್ ಮತ್ತು ರಾಜರಾಯರು ಮೂರೂ ಜನ ಕುಳಿತು ಆಲೋಚಿಸಿದರು. ಸುಶೀಲ ನಗರದ, ಸಬ್-ಡಿವಿಜನ್‌ನ ನಗರ ಸಭಾ ಕಛೇರಿಯಲ್ಲಿ ವಿಚಾರಿಸಿ, ಚುನಾವಣೆಗೆ ಓಟು ಹಾಕಲರ್ಹ ಪಟ್ಟಿಗಳ ಹೆಸರು ಮತ್ತು ವಿಳಾಸಗಳನ್ನು ಹೊರತೆಗೆಸಿ, ರಾಘವಪ್ಪ, ಅವನ ಹೆಂಡತಿ

ಮತ್ತು ಮಗಳು ರಾಣಿ ಇವರುಗಳ ಹೆಸರಿನ ಮೂಲಕ, ಅವನ ಹಿಂದಿನ ವಿಳಾಸದ ಪತ್ತೆ ಹಚ್ಚಿದರು. ಸದ್ಯ ಚುನಾವಣೆ ಅದೇ ತಾನೇ ಮುಗಿದುದರಿಂದ ವಿವರಗಳು ಪೂರ್ತಿ ಸಿಕ್ಕಿದುವು. ರಾಜಾರಾಯರು ತಾವೇ ಹೋಗಿ ಅವನ ಮನೆಯ ಓನರ್ ಬಳಿ, ಅವನ ಗುಣ. ನಡತೆ ಮತ್ತು ಉದ್ಯೋಗಗಳ ಬಗ್ಗೆ ವಿಚಾರಿಸಿದರು.

"ಅವ್ರು ಒಂದು ವ್ಯಾಪಾರ ಅಂತ ಖಾಯಂ ಮಾಡಲ್ಲ. ಒಂದು ಮನೇಲಿ ಅಂತ ಇರೋಲ್ಲ. ಮೂರು ತಿಂಗಳು ಈ ಮನೇಲಿ ಇದ್ರೆ, 6 ತಿಂಗಳು ಮಹಾತ್ಮ ಬಜಾರ್‌ನ ಇನ್ನೊಂದು ಮನೇಲಿರ್ತಾರೆ, ಮೊದ್ಲು ಬಟ್ಟೆ ವ್ಯಾಪಾರ ಮಾಡ್ತಿದ್ರು, ಅದ್ರಲ್ಲಿ ಲಾಸ್ ಆಯ್ತೂಂತ ಅಡಿಕೆ ವ್ಯಾಪಾರ ಶುರು ಮಾಡಿದ್ರು. ಈಗೇನೋ ದಳ್ಳಾಳಿ ಕೆಲ್ಸ ಶುರು ಮಾಡಿದ್ದೀನಿ ಅಂದಿದ್ರು. ನಮ್ಮನೇಲಿ ಇದ್ದದ್ದೇ ಅವರು ಆರೇ ತಿಂಗಳು, ಮೊದ್ಲು ಎಲ್ಲಿದ್ರು ಅಂತ ಗೊತ್ತಿರ್ಲಿಲ್ಲ. ಪಿ. ಐ.ರೊಬ್ರು ಮೊನ್ನೆ ಬಂದು ಕೇಳಿದ್ರು ಇದೇ ಪ್ರಶ್ನೆ. 2 ದಿನಗಳ ಹಿಂದೆ ಒಂದು ಪೋಸ್ಟ್ ಬಂದಿದೆ ರಾಘವಪ್ಪ ಮುರುಕಿನ ಮನಿಯುವರಿಗೆ, ಇಲ್ಲಿಗೆ ಬರೋ ಮೊದ್ಲು ಬೆಳಗಾವಿಯ ಹಿಂದೆವಾಡಿನಲ್ಲಿ ಇದ್ದಿರಬಹುದು ! ಅನಿಸುತ್ತೆ. ನಾವೂ ಬೇರೆಯವರ ಬದುಕಿನ ಬಗ್ಗೆ ಹೆಚ್ಚು ತಿಳ್ಕೊಳ್ಳೋಕೆ ಹೋಗಲ್ಲ; ಆದ್ರಿಂದ ನಮ್ಗೂ ಇದಕ್ಕಿಂತ ಹೆಚ್ಚು ಗೊತ್ತಿಲ್ಲ, ಹ್ಞಾ ಹಿಂದ್‌ವಾಡಿನಿಂದ ರೀ ಡೈರೆಕ್ಟ್ ಬಂದ ಪತ್ರ ನಮ್ಮಲ್ಲೇ ಇದೆ ನೋಡಿ" ಎಂದು ಎದ್ದು ಹೋಗಿ ಒಂದು ಪತ್ರವನ್ನು ತಂದು ತೋರಿಸಿದರು ಆ ಮನೆಯ ಒಡೆಯ, ಅದರಲ್ಲಿ ಬೆಳಗಾವಿಯ ವಿಳಾಸವಿತ್ತು.

ಮನೆಗೆ ಬಂದವರೇ. ರಾಜಾರಾಯರು ಬೆಳಗಾವಿಯಲ್ಲಿ ಸಂಬಂಧಿತ ಪೋಲೀಸ್ ರೆಕಾರ್ಡ್ಸ್‌ನಲ್ಲಿ ಯಾವುದಾದರೂ ಅಪರಾಧದಲ್ಲಿ ಭಾಗಿಯಾದ ಬಗ್ಗೆ ದಾಖಲುಗಳಿವೆಯೇ ಎಂದು ಪರಿಶೀಲಿಸುವಂತೆ ಕೇಳಿಕೊಂಡರು. ಮರು ದಿನವೇ ಅವರಿಗೆ ಅಲ್ಲಿಂದ ಉತ್ತರ ದೊರೆತಿತ್ತು ರಾಘವಪ್ಪ ಒಮ್ಮೆ ಸಾಲಗಾರರಿಗೆ ಮೋಸ ಮಾಡಿ 15,000 ರೂ. ಒಳಹಾಕಿಕೊಳ್ಳುವ ಸಂಚು ಹೂಡಿದ್ದ. ಮತ್ತು 2ನೇ ಸಲ ಬೇರೆಯವರ ಸೈಟ್ ಒಂದನ್ನು ತನ್ನದೆಂದು

ಮಾರಿ ಸಿಕ್ಕಿಹಾಕಿಕೊಂಡಿದ್ದ, ಈ ಎರಡು ಪ್ರಕರಣಗಳ ದಾಖಲೆ ಇದೆ ಎಂಬ ವರದಿ. ರಾಜಾರಾಯರು ಅದನ್ನು ಲಿಖಿತ ಪತ್ರದ ಮೂಲಕ ತಮ್ಮ ವಿಳಾಸಕ್ಕೆ ಕಳಿಸಿಕೊಡಬೇಕೆಂದು ಕೋರಿಕೊಂಡು ಆ ಬಗ್ಗೆ ಒಂದು ಪತ್ರವನ್ನು ಅಂದೇ ಬರೆದು ಹಾಕಿದರು.

ಈಗ 10 ದಿನಗಳ ಹಿಂದಷ್ಟೇ, ವಿ. ಆರ್. ಮುರುಕಿನ ಮನಿ ಎಂಬುವ ರೊಡನೆ ಅವರ ಸ್ನೇಹಿತನ ಮನೆಯಲ್ಲಿ ಆಕಸ್ಮಾತ್ ಭೇಟಿಯಾದಾಗ. ಸತ್ತ ಸುರೇಶನ ಬಗ್ಗೆ ಯಾರಿಗೂ ತಿಳಿಯದ ಕೆಲವು ವಿಷಯಗಳು, ತಾನಾಗಿಯೇ ಬೆಳಕಿಗೆ ಬಂದವು, ಕೇಸ್ ಗೆಲ್ಲಲು ಸಾಕಷ್ಟು ಶ್ರಮ ಪಡಬೇಕಾಗಿದ್ದ ರಾಜಾ ರಾಯರಿಗೆ ವಿ. ಆರ್. ಮುರುಕಿನ ಮನಿಯವರ ಆಕಸ್ಮಿಕ ಭೇಟಿ, ಅವರ ದಾರಿಯನ್ನು ಸುಗಮಗೊಳಿಸಿತ್ತು. ಶವ ಪರೀಕ್ಷಿಸಿದ ವೈದ್ಯರ ಮತ್ತು ಸಾಕ್ಷಿ ಗಳ ಆಧಾರದ ಮೇಲೆ ಗಟ್ಟಿಯಾಗಬಹುದಾಗಿದ್ದ ಪ್ರಕರಣವನ್ನು ಸುಲಭವಾಗಿ ಗೆಲ್ಲಲು ಎರಡು ಬಿಗಿಯಾದ ಅಧಿಕೃತ ಆಧಾರಗಳು ಹೆಚ್ಚು ಶ್ರಮವಿಲ್ಲದೇ ಸಿಕ್ಕಿಬಿಟ್ಟಿದ್ದವು.

ಅಂತೂ ಆ ನಿರ್ಣಾಯಕ ದಿನ ಬಂದೇ ಬಂದಿತು. ಎರಡೂ ಪಕ್ಷಗಳ ಸಾಕ್ಷಿಗಳಿಂದ ಅವರವರ ಹೇಳಿಕೆ ತೆಗೆದುಕೊಳ್ಳಲಾಯಿತು. ಪೋಲೀಸ್ ಆಫೀಸರೇ ಶೇಖರ್ ಮತ್ತು ಸಾಗರ್‌ರವರೊಡನೆ ಒಪ್ಪಂದ ಮಾಡಿಕೊಂಡ ಪಬ್ಲಿಕ್ ಪ್ರಾಸಿಕ್ಯೂಟರ್‌ರವರು ವೈದ್ಯರ ವರದಿ. ಸಾಕ್ಷಿಗಳ ಹೇಳಿಕೆ, ಪೋಲೀಸ್ ರಿಪೋರ್ಟ್ ಮತ್ತು ಇತರ ದಾಖಲುಗಳ ಆಧಾರದ ಮೇಲೆ ಪಾರ್ಟಿ ಸವಾಲುಗಳ ಬುನಾದಿಯ ಮೇಲೆ, ವಾದ ಯುದ್ಧದ ಕಣಕ್ಕಿಳಿದು, ತಮ್ಮ ಅಭಿಪ್ರಾಯ ಮಂಡಿಸಿದರು.

"ಯುವರ್ ಆನರ್ ಶಿಪ್ ಮೇ ಕೈಂಡ್ಲೀ ಸೀ, ದಟ್, ಈ ಹುಡುಗ ನಿಗೆ ಆಸ್ಪತ್ರೆಗೆ ಕರೆದೊಯ್ದುವೆಂದು ಹೇಳುವ ಆಪಾದಿತ ದಯಾಕರ್ ಮತ್ತವರ ಪತ್ನಿ ಇಬ್ಬರೂ ಪದವೀಧರರು. ಆದ್ದರಿಂದ ಬುದ್ಧಿವಂತರು. ಕತ್ತಲ ರಾತ್ರಿಯಲ್ಲಿ ನರಳಲೂ ಆಗದೆ ಸಾಯುವ ಹಾಗೆ ಬಿದ್ದವನನ್ನು ಎತ್ತಿ ಆಸ್ಪತ್ರೆಗೆ ಸ್ವಂತ ಹಣ ಕೊಟ್ಟು ಔಷಧಿ ಕೊಡಿಸುವ ಅಥವಾ ಇಂಥ ಆಪಾದನೆ

ಹೊರುವಂಥ ದಡ್ಡರಲ್ಲ" ಪಬ್ಲಿಕ್ ಪ್ರಾಸಿಕ್ಯೂಟರರು ಆರಂಭದ ಮಾತು ಹೇಳಿದರು.

"ಮೈ ಲಾರ್ಡ್‌ಷಿಪ್. ಐ ಲೈಕ್ ಟು ಸಬ್‌ಮಿಟ್— "ರಾಜಾ ರಾಯರು ನಗುತ್ತ ಹೇಳಿದರು, "ಒಂದಲ್ಲ ಮೂರು ಪದವಿ ಪಡೆದವರನ್ನು ಬುದ್ಧಿವಂತರೆಂದು ಹೇಳಲು ಸಾಧ್ಯವಿಲ್ಲ. ಪದವಿಗಳು ಬುದ್ಧಿವಂತಿಕೆಯ ಅಳತೆಗೋಲು ಅಲ್ಲದೇ ಘಟನೆಗಳು ಘಟಿಸುವುದಕ್ಕೂ ಜ್ಞಾನಕ್ಕೂ ಸಂಬಂಧವೇ ಇಲ್ಲ. ಏಕೆಂದರೆ ಯಾವ ಘಟನೆಗಳೂ ನಮ್ಮನ್ನು ಹೇಳಿ, ಕೇಳಿ ನಡೆಯುವುದಿಲ್ಲವಾದ್ದರಿಂದ, ನಾವು ಅದರಲ್ಲಿ invlove ಆಗಿದ್ದರೂ, ಮುಂದೆ ಏನು ನಡೆಯುತ್ತದೆಂದು, ದಯಾಕರನಂಥ ಬುದ್ಧಿವಂತನೇ ಏಕೆ, ಒಬ್ಬ ಮೇಧಾವಿ ಭವಿಷ್ಯವಾದಿಯೂ ಸರಿಯಾಗಿ ಹೇಳಲಾರ. ಇದೇ ಪ್ರಕರಣದಲ್ಲಿ ನೋಡಿ. ಇಷ್ಟವಿಲ್ಲದಿದ್ದರೂ, ದಯಾಕರ ಸಹಾಯಕ್ಕೆ ಕೈ ಹಾಕಿದ ಉಪಕಾರಿಯಾದ. ತನಗೇ ತಿಳಿಯದಂತೆ ಕೊಲೆ ಪಾತಕಿಯಾದ, ಖೈದಿಯಾದ ಹಾಗೇ, ಈಗ ಇಲ್ಲಿ ಮರ್ಯಾದಸ್ಥರಾಗಿ. ಶ್ರೀಮಂತರಾಗಿ ಕುಳಿತಿರುವ ರಾಘವಪ್ಪ ಇನ್ನೊಂದೆರಡು ಘಳಿಗೆಯಲ್ಲಿ ಸುಳ್ಳನಾಗಿ, ತಪ್ಪಿತಸ್ಥ ನಾಗಿ, ಅಥವಾ ಖೈದಿಯಾಗಿಯೂ ಮಾರ್ಪಾಡಾಗಬಹುದು ಇದರಿಂದ ಮೈ ಲಾರ್ಡ್ ಘಟನೆಗಳು ನಮ್ಮವಲ್ಲ,"

"Please ನಂಗೆ ನನ್ನ ಮಾತು ಹೇಳೋಕೆ ಬಿಡಿ" ಪಬ್ಲಿಕ್ ಪ್ರಾಸಿ ಕ್ಯೂಟರ್, ನೇರವಾಗಿ ರಾಜಾರಾಯರಿಗೇ ಹೇಳಿ, ನ್ಯಾಯಾಧೀಶರ ಕಡೆ ನೋಡಿದರು.

"Yes Yes ಲೆಟ್ ಹಿಂ ಕಂಟಿನ್ಯೂ ಹಿಸ್ ಆರ್ಗ್ಯೂಮೆಂಟ್." ರಾಜಾರಾಯರ ತತ್ವಕ್ಕೆ ಮೆಚ್ಚಿ ಮುಗುಳ್ನಕ್ಕ ನ್ಯಾಯಪಾಲಕರು ಪಬ್ಲಿಕ್ ಪ್ರಾಸಿಕ್ಯೂಟರ್‌ರವರ ವಿವರಣೆ ಮುಂದುವರಿಸಲು ಅನುಮತಿ ನೀಡಿದರು, "ಹೇಳಿ, ಹೇಳಿ,"

"ಯುವರ್ ಆನರ್, ಹುಡುಗನಿಗೆ ಮೂರ್ಛೆ ರೋಗದ ಚಿಹ್ನೆ ಇದ್ದರೂ ತಲೆಗೆ ಬಿದ್ದ ಪೆಟ್ಟಿನಿಂದ ಅವನ ಮರಣ ಸಂಭವಿಸಿದೆ, ಎಂದು ವೈದ್ಯರ ವರದಿ ತಿಳಿಸುತ್ತದೆ. ಇಷ್ಟು ಸಣ್ಣ ಪ್ರಮಾಣದಲ್ಲಿ ಫಿಟ್ಸ್ ಇದ್ದಾಗ

BUREAU OF COPY RIGHT COLLECTION,

ಯಾರಿಗಾದರೂ, ಕಣ್ಣು ಕತ್ತಲಿಡಬಹುದು, ನಿಧಾನವಾಗಿ ಕೆಳಗೆ ಕುಸಿದು ಕುಳಿತುಕೊಳ್ಳಬಹುದೇ ವಿನಃ ತಲೆಗೆ ಅಪ್ಪಳಿಸುವಂತೆ ರಪ್ಪನೆ ಬೀಳುವ ಹಾಗೆ ಮೂರ್ಛೆ ಬರಲ್ಲ ಎಂದೂ ಆ ವೈದ್ಯ ಹೇಳಿಕೆ ನೀಡಿದ್ದಾರೆ. ಆದ್ದರಿಂದ ಸುರೇಶನಿಗೆ ಕೆಳಗೆ ಬೀಳುವ ಹಾಗೆ ಯಾರೋ ತಲೆಯ ಹಿಂಭಾಗಕ್ಕೆ ಪೆಟ್ಟು ಹಾಕಿದ್ದಾರೆ ಎನ್ನುವುದು ಖಚಿತ.

ಇನ್ನೊಂದು ಅಂಶ, ಈ ಸುರೇಶ್ ಮುರ್ಕಿನಮನಿ ಬಿದ್ದದ್ದು ಮಣ್ಣಿನ ಕಾಲುದಾರಿಯ ಮೇಲೆ. ಅಲ್ಲಿ ಬಿದ್ದ ಜಾಗದಲ್ಲಿ, ಎಲ್ಲೂ ದೊಡ್ಡ ಕಲ್ಲುಗಳಿಲ್ಲ. ಆದರೆ ಪಕ್ಕದಲ್ಲಿದ್ದ ಒಳಚರಂಡಿಯಲ್ಲಿ ಚಪ್ಪಟೆಯಾದ ಕಲ್ಲುಗಳಿವೆ. ಅವನು ಬಿದ್ದ ಜಾಗ ಅಂದರೆ ಆಪಾದಿತನೇ ತೋರಿಸಿದ ಜಾಗ, ಅದು ಬರೀ ಮಣ್ಣಿನ ಫುಟ್‌ಬಾತ್, ಆದ್ದರಿಂದ ಇದು..."

"ಐ ಆರ್‌ಗ್ಯೂ ವಿತ್ ರೆಸ್‌ಪೆಕ್ಟ್ ಮೈ ಲಾರ್ಡ್, ತಲೆಗೆ ಏಟು ಬೀಳಲು ದೊಡ್ಡ ಕಲ್ಲೇ ಬೇಕಿಲ್ಲ". ರಾಜಾರಾಯರು ಪ್ರಾಸಿಕ್ಯೂಟರ್‌ರವರ ಮಾತು ಕತ್ತರಿಸಿ ಹೇಳಿದರು. "ಸುರೇಶ ಮುರ್ಕಿನಮನಿ ಬಿದ್ದದ್ದು ಮುಖ್ಯ ರಸ್ತೆಯ ಪಕ್ಕದ ಕಾಲು ದಾರಿಯಲ್ಲಿ. ತಲೆಯ ಭಾಗ. ಕಾಲುದಾರಿಯ ಅಂಚಿಗೆ ಜೋಡಿಸಿದೆ, ಬಣ್ಣ ಬಳಿದ ಹೆಚ್ಚು ಅಗಲವಿಲ್ಲದ ಕಲ್ಲು ಸಾಲಿನ ಮೇಲೆ ಧೊಪ್ಪನೆ ಅಪ್ಪಳಿಸಿದೆ. ದಯಾಕರ ಅದನ್ನು ನೋಡಿಲ್ಲ. ಹಿಂಬದಿ ತಲೆಯ ಕೆಳಭಾಗ ಕಲ್ಲಿಗೆ ತಗುಲಿ, ಸ್ವಲ್ಪ ಜೋತಾಡಿದಂತೆ ಇದ್ದುದನ್ನು ಕಂಡು, ಅವನನ್ನು ಮರಳಿನ ಮೇಲೆ ಎಳೆದು ಸರಿಯಾಗಿ ಮಲಗಿಸಿದ್ದಾರೆ, ಗುರುರಾಜ್ ಮತ್ತವರ ಸಹೋದ್ಯೋಗಿಗಳು. ಆ ಬಗ್ಗೆ ಅವರನ್ನು ಪ್ರಶ್ನಿಸಿದ್ದಾಗಿದೆ. ದಯಾಕರ ಮತ್ತು ಸುಮನಾ ನೋಡಿದಾಗ. ಸುರೇಶ ಮಗ್ಗುಲಾಗಿದ್ದ ಅದೇ ಜಾಗದಿಂದ" ದಟ್ಸ್ ಆಲ್ ಯುವರ್ ಆನರ್"

"ಇನ್ನೊಂದು ಅಂಶ, ಮೈ ಲಾರ್ಡ್". ಪಿ. ಪಿ. ತಮ್ಮ ವಿವರಣೆ ಮುಂದುವರಿಸಿದರು." ಕೊಲೆಗೆ ಕಾರಣ ಸುರೇಶ್ ಮುರ್ಕಿನಮನಿಯ ಜೇಬಿನಲ್ಲಿದ್ದ 10,000 ರೂ.ಗಳ ಹಣ ಸುರೇಶನ ಬಳಿ ಇದ್ದ ಹಣ ಆರೋಪಿಯ ಕಣ್ಣಿಗೆ ಬಿದ್ದದ್ದು ವಿಶ್ವಾಸ್ ಹೋಟೆಲ್‌ನಲ್ಲಿ. ಮನೆಯಿಂದ ಎರಡೂವರೆ ಘಂಟೆಗೆ ಹೊರಟ ಸುರೇಶನಿಗೆ, ಸಾರಗನಪುರಕ್ಕೆ ಅಥವಾ

ಮಾರುತಿ ಗುಡ್ಡಕ್ಕೆ ಹೋಗಲು ಸರಿಯಾದ ಬಸ್‌ಗಳೂ ತಿಳಿದಿರಲಿಲ್ಲಾ. ಕೃಷ್ಣಾ ನಗರದಿಂದ ಬಹದ್ದೂರ್‌ಪುರಕ್ಕೆ ಹೋಗಿ, ಅಲ್ಲಿಂದ ಸಾರಗನಪುರಕ್ಕೆ ಹೋಗುವ ಬಸ್‌ಗಾಗಿ ಕಾದಿರಬೇಕು. ಕಾದು ಬೇಸರವಾದ್ದರಿಂದ ಸುಶೀಲ ನಗರದ 14ನೇ ಬ್ಲಾಕ್‌ಗೆ ಹೋಗುವ ಬಸ್ಸನ್ನೇ ಹತ್ತಿ ಹೊರಟಿದ್ದಾನೆ. ಬಸ್ಸಿಗೆ ಕಾದು ಸುಸ್ತಾದವ, 14ನೇ ಬ್ಲಾಕ್‌ನಲ್ಲಿಳಿದು, ವಿಶ್ವಾಸ್ ಹೋಟೆಲಿನಲ್ಲಿ ತಿಂಡಿ ತಿನ್ನಲು ಹೋದ. ಆಕಸ್ಮಾತ್ತಾಗಿ, ಅದೇ ಸಮಯಕ್ಕೆ ದಯಾಕರನೂ ಅಲ್ಲಿಗೆ ಕಾಫಿ ಕುಡಿಯಲು ಬಂದಿದ್ದಾನೆ. ಬಿಲ್ ಕೊಡಲು ಈ ಇಬ್ಬರೂ ಒಟ್ಟಿಗೇ ಕೌಂಟರ್ ಬಳಿ ನಿಂತಿದ್ದಾರೆ. ಬಿಲ್‌ನ ದುಡ್ಡು ತೆಗೆಯಲು ಹೋದಾಗ ಸುರೇಶನ ಜೇಬಿನಿಂದ 10,000 ರೂ.ನ ಹಣದ ಕಟ್ಟು ಕೆಳಗೆ ಬಿತ್ತು. ಗಬಕ್ಕನೇ ಎತ್ತಿ ಆ ಹಣವನ್ನು, ಸುರೇಶ ತನ್ನ ಜೇಬಿನೊಳಗೆ ಭದ್ರವಾಗಿ ಇಟ್ಟುಕೊಂಡದ್ದನ್ನು ಆಪಾದಿತ ನೋಡಿದ. ಅವನು ನೋಡಿದ್ದನ್ನು ಕಂಡು ಸುರೇಶ ಸುಮ್ಮನೆ ನಕ್ಕ. "ಸ್ವಲ್ಪ ಹುಷಾರಾಗಿರಬೇಕು ರೀ" ಎಂದು ದಯಾಕರ ಉಪದೇಶಿಸಿದ. ಆಮೇಲೆ ಪರಸ್ಪರರು ಸುಮ್ಮನೇ ಏನೋ ಒಂದೆರಡು ಮಾತಾಡಿದರು. ಬಿಲ್ ಕೊಟ್ಟ ಮೇಲೆ ಇಬ್ಬರೂ ಮಾತಾಡುತ್ತಲೇ ಒಟ್ಟಿಗೇ ಹೋಟೆಲಿನ ಮೆಟ್ಟಲಿಳಿದು ಹೊರ ಹೋಗಿದ್ದಾರೆ. ಇದೆಲ್ಲವನ್ನೂ ಗಮನಿಸಿದವರು ವಿಶ್ವಾಸ್ ಹೋಟೆಲಿನ ಮಾಲೀಕರು, ಕೌಂಟರಿನಲ್ಲಿ ಕೂತಿದ್ದ ಅವರು ಇದೆಲ್ಲವನ್ನೂ ಕಂಡುದಾಗಿ ತಿಳಿಸಿದ್ದಾರೆ,

"ಕಳ್ಳತನ ಆಪಾದಿತನ ಹವ್ಯಾಸ ಎಂದು ಜಾರ್ಜ್ ಆಗಲೇ ಸಾಕ್ಷಿ ನೀಡಿದ್ದಾರೆ. ಕಸಬುದಾರ ಕಳ್ಳ, ಸಿಕ್ಕ ಈ ಸುಸಂದರ್ಭ ಬಿಡಲಿಲ್ಲ. ದಯಾಕರನ ಕಣ್ಣು ಆ ಹಣದ ಮೇಲೆ ಇತ್ತೆಂದೂ, ಬಿಲ್ ಕೊಟ್ಟ ಮೇಲೆ ಇಬ್ಬರೂ ಕೆಳಗಿಳಿದು ಹೋದರೆಂದೂ ಹೋಟೆಲ್ ಮಾಲಕರು ಹೇಳಿದ್ದಾರೆ. ರಜೆಯ ಮೇಲಿದ್ದ ಆಪಾದಿತನಿಗೆ, ಎಲ್.ಟಿ.ಸಿ. ಹಣವಲ್ಲದೇ ಹೊಸ ಮಡದಿಗೆ ಒಡವೆ ವಸ್ತ್ರ ಕೊಂಡು ಕೊಡಿಸಲು ಹಣ ಬೇಕಿತ್ತೇನೋ? ಅಲ್ಲದಿದ್ದೂ ಹಣ ಕಳ್ಳತನದ ಹವ್ಯಾಸಿ ತಾನೇ? ಸುರೇಶನನ್ನು ಎಲ್ಲಿಗೆ ಹೋಗಬೇಕೆಂದು ಕೇಳಿ, ಬೇಕಾದರೆ ಕಾರಲ್ಲಿ ಡ್ರಾಪ್ ಕೊಡುತ್ತೇನೆಂದೂ ತಿಳಿಸಿ, ತನ್ನ ಕಾರಿನಲ್ಲಿ ಕೂಡಿಸಿಕೊಂಡು, ಸದಾ ಜನರ ಓಡಾಟ ಕಡಿಮೆ ಇರುವ ತೋಟದ ರಸ್ತೆಗೆ ಅಂದರೆ 4ನೇ ಮುಖ್ಯ ರಸ್ತೆಗೆ ಕರೆದೊಯ್ದು ಹಣ ಕೊಡುವಂತೆ ಪೀಡಿಸಿ

ದ್ದಾನೆ. ಅವನು ಒಪ್ಪಿಕೊಳ್ಳದಿದ್ದಾಗ, ಅವನನ್ನು ಕೆಳಗಿಳಿಸಿ ಜಗಳವಾಡಿರಬಹುದು. ಸುರೇಶ್ ಕೆಳಗೆ ಬಿದ್ದಿದ್ದಾನೆ ಈ ಜಗಳದಲ್ಲಿ, ಕಾಲುದಾರಿಯ ಅಂಚಿನಲ್ಲಿ ಸುರೇಶ್ ಮಲಗಿ ಹೊರಳಾಡಿದ ಗುರುತಿತ್ತು. ಅಷ್ಟಾದರೂ ಸುರೇಶ್ ಹಣ ಕೊಡಲು ನಿರಾಕರಿಸಿದಾಗ, ಅಲ್ಲೇ ಕಾಲುದಾರಿಯ ಪಕ್ಕದಲ್ಲಿ ಬಿದ್ದ ಚಪ್ಪಟೆಯಾದೊಂದು ಕಲ್ಲಿನಿಂದ, ಸುರೇಶನ ಹಿಂತಲೆಗೆ ಕುಟ್ಟಿ ಹಣ ಕಸಿದಿದ್ದಾನೆ. ಬಹುಶಃ ಅವನ ಪ್ರಾಣ ಆ ತಕ್ಷಣ ಹೋಗಿಲ್ಲವಾದ್ದರಿಂದ, ಸುರೇಶ ಮುಲುಗುತ್ತಾ ಮಲಗಿದ್ದಾನೆ. ಚಪ್ಪಟೆಯಾಕಾರದ ಒಂದೆರಡು ಕಲ್ಲುಗಳನ್ನು ಹೊರ ತೆಗೆದು ತೋರಿಸಿದ ವಕೀಲರು,

"ನೋಡಿ, ಇವು ಇಲ್ಲೇ ಇರುವ ಒಣ ಚರಂಡಿಯಲ್ಲಿ ಬಿದ್ದ ಕಲ್ಲುಗಳಲ್ಲಿ ಒಂದೆರಡು" ಎಂದು ಹೇಳಿ ತಮ್ಮ ಹೇಳಿಕೆ ಮುಂದುವರಿಸಿದರು. ಆಮೇಲೆ ನೋವಿನಿಂದ ನರಳುವ ಹುಡುಗನಿಗೆ ಫಿಟ್ಸ್ ಬಂದಿತ್ತು ಎನ್ನುವ ನಾಟಕ. ಫಿಟ್ಸ್ ಬಂದದ್ದು ಕಂಡಂತೆ ಸಾಕ್ಷಿಗಳ ಸೃಷ್ಟಿ. ಜೊತೆಗೆ ಬಂದವರ ಹೆಸರು, ವಿಳಾಸ, ಒಂದೂ ತಿಳಿಯದು ಎಂದು ಜ್ಯೂಡಿಷಿಯಲ್ ಕಸ್ಟಡಿಯಲ್ಲಿರುವವರೆಗೂ ದೃಢವಾಗಿ ಹೇಳಿದ ದಯಾಕರ್‌ಗೆ, ಅದೇ ಮಾತನ್ನು ಪ್ರತಿಪಾದಿಸಿದ ಹೆಂಡತಿಗೆ, ಈ ಗುರುರಾಜ್‌ರವರ ಗುಂಪು ಇದ್ದಕ್ಕಿದ್ದಂತೆ ಸಿಕ್ಕಿದ್ದು ಹೇಗೆ? ಎಲ್ಲಿ? ಹು ಹ್, ಎಲ್ಲ ದಯಾಕರ್ ಪೋಲೀಸ್ ಕಸ್ಟಡಿಯಿಂದ ಹೊರ ಬಂದ ನಂತರ ಸೃಷ್ಟಿಗೊಂಡ ಸಾಕ್ಷಿಗಳ ತಂಡ..."

ದಯಾಕರನ ಪಕ್ಷಕ್ಕೆ ಮೈ ಜುಮ್ಮೆಂದಿತ್ತು. ಎಷ್ಟು ಆಕರ್ಷಕವಾದ ಸುಳ್ಳು ಕತೆ? ದಿಢೀರನೇ ಇಳಿದು ಬಂದ ರಸವತ್ತಾದ ಸುಳ್ಳು ಘಟನೆಗಳು? ಅವುಗಳನ್ನು ಡಂಗುರ ಹೊಡೆದು ಸಾರಲು, ಸಾಲಾಗಿ ಬಂದು ನಿಂತ ಸುಳ್ಳು ಸಾಕ್ಷಿಗಳ ಮೆರವಣಿಗೆ: ಹುಂ......ದಯಾಕರ ಮತ್ತು ಅವನ ಹೆಂಡತಿ ಸುಮನಾಗೆ ಕೋಪದ ಆವೇಗದಲ್ಲಿ ಮೈ ಥರಗುಟ್ಟಿ, ಮಾತು ತೊದಲು ತೊದಲಾಗತೊಡಗಿತ್ತು. ಅವನ ತಂದೆ–ತಾಯಿಗಳಿಗಂತೂ ತಮ್ಮ ನಾಲಗೆಯ ಹೊರಳಾಟವೇ ಸ್ಥಗಿತಗೊಂಡಂಥ ಅನಿಸಿಕೆ. ಆ ಸಮಯದಲ್ಲೂ, ರಾಜಾರಾಯರು ನೀಡುತ್ತಿದ್ದ ಭರವಸೆಯೊಂದೇ ಅವರ ಉಸಿರಾಟಕ್ಕೆ ಆಮ್ಲಜನಕ ಒದಗಿಸುತ್ತಿದ್ದ ಸಾಧನ. ಅಂದರೆ ಅವರ ಹೆಂಡತಿ ಸುಮನಾ ಎಲ್ಲಿದ್ದರು? ಇದೆಲ್ಲ ನಡೆಯುವಾಗ? ಪಿ.ಪಿ.ಗೇ ಸವಾಲು ಮಾಡಿದರು ರಾಜಾರಾವ್.

"ಮನೆಯಲ್ಲಿ, ದಯಾಕರ 5 ಘಂಟೆಗೆ ಮನೆ ಬಿಟ್ಟು ಅವರ ಫ್ರೆಂಡ್ ಮನೆಗೆ ಹೋಗಿದ್ದಾರೆ. ಅಲ್ಲಿ ಅವರು ಸಿಗಲಿಲ್ಲ. ಆಮೇಲೆ ಲೈಬ್ರರಿಯಲ್ಲಿ ಕೂತು ತಿರುಗಿ ಅವರ ಮನೆಗೆ ಹೋಗಿ ಬೀಗ ನೋಡಿಕೊಂಡು 6 ಘಂಟೆಗೆ ವಾಪಸಾಗಿದ್ದಾರೆ. ಈ ಮಾತೆಲ್ಲ ನಿಜ. ಹೆಂಡತಿ ಹೇಳಿದಂತೆ, ಮರೆತು ಹೋದ ಫೋಟೊ ಫಿಲಂ ತರಲು ಮತ್ತೊಮ್ಮೆ 14ನೇ ಬ್ಲಾಕ್‌ಗೆ ಹೋಗಿರುವುದೂ ನಿಜ. ಅಲ್ಲಿಂದ ವಿಶ್ವಾಸ್ ಹೋಟೆಲಿನಲ್ಲಿ 6 1/2 ಘಂಟೆಗೆ ಕಾಫಿ ಕುಡಿದದ್ದು ನಿಜ, ಎಂದೆಲ್ಲ ದಯಾಕರನೂ ಒಪ್ಪಿಕೊಂಡಿದ್ದಾರೆ. ಆದರೆ ಸುರೇಶ ಸಿಕ್ಕಿದ್ದನ್ನು, ಹಣ ಹೊಡೆದುದನ್ನು ಮಾತ್ರ ಒಪ್ಪುತ್ತಿಲ್ಲಾ ಅವರು. ಆದರೆ ಆ ನಿಜವನ್ನು ನಾವು ಕಂಡು ಕೊಂಡಿದ್ದೇವೆ. ರಸ್ತೆಯಲ್ಲಿ ಇಬ್ಬರು ರಾತ್ರಿ 7 ಘಂಟೆಯ ಮೇಲೆ ಜಗಳಾಡಿಕೊಂಡರೆ, ಯಾರೋ ಕುಡುಕರು ಎಂದುಕೊಳ್ಳುವವರೇ ಹೆಚ್ಚು ಜನ. ಅದೂ ಜನವೇ ಇಲ್ಲದ ಜಾಗಕ್ಕೆ. ಈ ದಯಾಕರ ಕರೆದೊಯ್ದುದ್ದು. ದಯಾಕರನ ಸಂಚನ್ನು ಯಾರೂ ತಡೆಗಟ್ಟಲೂ ಇಲ್ಲ. ಗಮನಿಸಲೂ ಇಲ್ಲ. ಆಮೇಲೆ 7 ಘಂಟೆಗೆ ಮನೆಗೆ ಬಂದು ಸುಮನಾಳನ್ನು ಕರೆದುಕೊಂಡು, ಅದೇ ದಾರಿಯಲ್ಲಿ, ಅದೇ ಕಾರಿನಲ್ಲಿ ಬಂದಿದ್ದಾನೆ. ಮುಂದೆ ಸಹಾಯದ ಸೋಗು ಸಾಗಿದೆ. ಹನಿಮೂನ್‌ಗೆ ಹೊರಟ ಜೋಡಿಗಳಿಗೆ ಕೊಲೆಯಲ್ಲಿ ಆಸಕ್ತಿ ಎಲ್ಲಿರುತ್ತೆ? ಅವರ ಬಗ್ಗೆ ಯಾರಿಗೆ ತಾನೇ ಅನುಮಾನ ಬರುತ್ತೆ ಎನ್ನುವ ಆತ್ಮವಿಶ್ವಾಸವೂ ಇದ್ದಿರ ಬಹುದು. ಅದು ಕಳಚಿ–ಉದುರಿದ್ದು, ರಾಘವಪ್ಪ. ಈ ಇಬ್ಬರನ್ನೂ ಹೊರಡಲು ಬಿಡದೇ ಪೋಲೀಸರನ್ನು ಕರೆಸಿದಾಗ, ಹೆಂಡತಿಯೊಡನೆ ಬಂದ ದಯಾಕರ, ಸುರೇಶನನ್ನು, ಎತ್ತಿ ಕಾರಿನಲ್ಲಿ ಮಲಗಿಸಿಕೊಂಡದ್ದು ಪೂರ್ವ ಯೋಜಿತವೇ, ಇದ್ದರೂ ಇರಬಹುದು. ಮನೆಗೆ ಹೋಗಿ ಬರುವಾಗ ಈ ರೀತಿ ಮಾಡಿದರೆ ಎನ್ನುವ ಯೋಚನೆ ಬಂದಿರಬಹುದು. ಹಾಗೇ ಮಾಡಿದ್ದಾರೆ. ಇದರಲ್ಲಿ ಸುಮನಾಳ ಅಂಶ ಮಾತ್ರ ತುಂಬಾ ಕಡಿಮೆ. ಆಸ್ಪತ್ರೆಗೆ ತಲುಪುವ ಹೊತ್ತಿಗೆ ಸುರೇಶನ ಪ್ರಾಣ ಹೋಗಿದೆ. ಆಗಲೇ ಘಾಬರಿಯೂ ಆಗಿದೆ, ದಯಾಕರನಿಗೆ ಹಣ ಬೇಕಿತ್ತೇ ವಿನಃ ಪ್ರಾಣ ಬೇಕಿರಲಿಲ್ಲ. ಕೊಲ್ಲುವ ಉದ್ದೇಶವೂ ಇರಲಿಲ್ಲ. ಆದರೆ ಸುರೇಶ ದಾರಿಯಲ್ಲೇ ಸತ್ತು ಹೋಗಿದ್ದ. ಆದ್ದರಿಂದ ಸರ್ಕಾರಿ ಆಸ್ಪತ್ರೆಯ ಬಹುಶಃ ತನಗೆ ಪರಿಚಯವಿರಬಹುದಾದ

ವೈದ್ಯರ ಬಳಿ ಕೊಂಡೊಯ್ದು ಪರೀಕ್ಷೆ ಮಾಡಿಸದೇ ಡೆಡ್ ವಾರ್ಡ್‌ನಲ್ಲಿ ಹಾಕಿಕೊಳ್ಳುವಂತೆ ಕೇಳಿಕೊಂಡ, ಅದು ಆಗದು ಎಂದು ಅವರು ತಿಳಿಸಿದಾಗ 100 ರೂ. ಕೊಟ್ಟು ಪೋಸ್ಟ್-ಮಾರ್ಟಮ್ ಮಾಡಿಸದಂತೆ ನೋಡಿಕೊಂಡು, ಹೆಣ ಹಿಂದೆ ಪಡೆದಿದ್ದಾನೆ. ಆಸ್ಪತ್ರೆಗೆ ಹೆಣ ಯಾರೇ ತಂದರೂ, ಅದನ್ನು ಪರೀಕ್ಷಿಸಿಯೇ ಹಿಂದಿರುಗಿಸುವುದು, ಪ್ರತಿಯೊಬ್ಬ ವೈದ್ಯನ ಆದ್ಯ ಕರ್ತವ್ಯ. ಆದರೆ ಈ ವೈದ್ಯ. ಶ್ರೀ ಜಾನಕೀರಮಣ್, ಅನುಮಾನ ಬಂದರೂ, ಕರ್ತವ್ಯ ತಿಳಿದಿದ್ದರೂ. ದಯಾಕರ ಮತ್ತವನ ಪತ್ನಿಯ ಮುಖ ನೋಡಿ, ಏನೋ ವಿಶ್ವಾಸ ಮೂಡಿ. ಹಿಂದಿರುಗಿ ಕಳಿಸಿದೆ ಎನ್ನುತ್ತಾರಲ್ಲ? ಯಾರ ಮೇಲೆ ಯಾರಿಗೆ ವಿಶ್ವಾಸ? ಪರಿಚಯವಿದ್ದರೂ ಪರಸ್ಪರರನ್ನು ನಂಬದ ಈ ಕಾಲ ದಲ್ಲಿ ಎಂದೂ ಕಂಡರಿಯದ ದಯಾಕರನ ಬಗ್ಗೆ ವೈದ್ಯರಿಗೆ ವಿಶ್ವಾಸವೇ? ಅಥವಾ ಅವನ ಹಿಂದಿದ್ದ ಹೆಂಡತಿಯ ಮೇಲೆ ನಂಬಿಕೆಯೇ? ಇದೆಲ್ಲ ಸುಳ್ಳು ಕತೆ. ದಯಾಕರನಿಂದ ಹಣ ಪಡೆದ ವೈದ್ಯ ಸುಳ್ಳು ಹೇಳಿಕೆ ಕೊಡುತ್ತಿದ್ದಾರೆ ಅಷ್ಟೇ, ಹಾಗಿಲ್ಲದಿದ್ದರೆ ಹೆಣದ ಪೋಸ್ಟ್-ಮಾರ್ಟಮ್ ಮಾಡದೇ ಹಿಂದಿರು ಗಿಸಿದ್ದು ಕರ್ತವ್ಯಚ್ಯುತಿ ಅಲ್ಲವೇ? ಎಂದು ಪ್ರಶ್ನಿಸಿದ ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತೊಮ್ಮೆ ವೈದ್ಯ ಜಾನಕೀರಮಣ್ ಅವರನ್ನು ಕಟಕಟೆಯ ಮೇಲೆ ಕರೆಸಿ ಕೊಳ್ಳಲು ಅಪ್ಪಣೆ ಕೇಳಿದರು.

"ಜಾನಕೀರಮಣ್ ಇನ್ನೊಮ್ಮೆ ಹೇಳಿ, ಹಣ ಪಡೆಯದೇ, ಕರ್ತವ್ಯ ಲೋಪಕ್ಕೆ ಯಾರೂ ಸಿದ್ಧರಾಗುವುದಿಲ್ಲ ಅಲ್ವಾ? ನಿಜ ಹೇಳಿ ಡಾಕ್ಟರೇ? ಇದು ಕರ್ತವ್ಯಚ್ಯುತಿ ಅಲ್ವೇ?"

ತಲೆ ತಗ್ಗಿಸಿದ ವೈದ್ಯ ಇದು ಕರ್ತವ್ಯಚ್ಯುತಿಯೇನೋ ಹೌದು, ಆದ್ರೆ ನನಗೆ ಆ ಗಂಡ–ಹೆಂಡತಿಯರ ಮುಖ ನೋಡಿದಾಗ ಕೊಲೆ ಮಾಡಿದವರು ಎಂದು ಅಷ್ಟೊಂದಾಗಿ ಅನಿಸಲಿಲ್ಲ. ಏನೇ ಅನಿಸಿರಲಿ ನನ್ನ ಡ್ಯೂಟಿ ನಾನು ಮಾಡಬೇಕಿತ್ತು, ಅಷ್ಟೆ. ಆ ತಪ್ಪನ್ನು ನಾನು ಆಗಲೇ ಒಪ್ಪಿಕೊಂಡಿದ್ದೇನೆ, ಇಲ್ಲಿಗೆ ಬಂದು ತನ್ನ ಪರವಾಗಿ ಸಾಕ್ಷಿ ಹೇಳು ಎಂದಾಗಲೀ, ಶವ ಪರೀಕ್ಷೆ ಮಾಡದೇ ಹೆಣ ಹಿಂದೆ ಕೊಡಿ ಎಂದಾಗಲೀ. ನ್ಯಾಚುರಲ್ ಡೆತ್ ಎನ್ನುವ ಪ್ರಮಾಣ ಪತ್ರ ನೀಡಿ ಎಂದೇ ಆಗಲೀ, ಏನೂ ನನಗೆ ದಯಾಕರ ಕೇಳಿ ಕೊಳ್ಳಲೂ ಇಲ್ಲ. ಟೆಸ್ಟ್ ಮಾಡಿದ್ದಕ್ಕೆ ಫೀ ನೂರು ರೂಪಾಯಿ ಕೊಡಿ

ಎಂದು ನಾನೇ ಕೇಳಿದೆ. ಅವರು ಕೇಳಿದಷ್ಟನ್ನು ಕೊಟ್ಟರು ಅಷ್ಟೆ, ನಮ್ಮ ಆಸ್ಪತ್ರೆಗಳಲ್ಲಿ ಈ ರೀತಿ ದುಡ್ಡು ತೆಗೆದುಕೊಳ್ಳಬಾರದು ನಿಜ. ಅದೂ ನನ್ನ ತಪ್ಪು. ಆದ್ರೆ ಇದು ಇಷ್ಟೊಂದು ಗಂಭೀರ ಪ್ರಕರಣವಾಗಬಹುದೆಂದು ನನಗೆ ಖಂಡಿತ ಅನಿಸಲೇ ಇಲ್ಲ. ಎಂಥೆಂಥ ತಪ್ಪು ಮಾಡಿದವರು, ದುಡ್ಡು ಕಸಿದವರು ತಮ್ಮ ತಪ್ಪುಗಳನ್ನು ಹೊರ ಬರದಂತೇ ಉಳಿಸಿಕೊಂಡಿದ್ದಾರೆ, ಅದಕ್ಕೇ ನಂಗೆ ಇದೇನು ಮಹಾ ಎನ್ನಿಸಿತು."

"ನಿಮ್ಗೆ ಹಣ ಬಂದದ್ದು ಮುಖ್ಯ ಎನಿಸಿತು, ಕೊಲೆಯಾಗಿದೆಯೇ ಎಂದು ಹೆಣದ ಪರೀಕ್ಷೆ ಮಾಡದೇ ದಯಾಕರನನ್ನು ಕಳಿಸಿಬಿಟ್ಟರು. ರೋಗಿ ಬಯಸಿದ್ದೂ ಅದೇ ಆಗಿತ್ತು ಅಲ್ವೇ ?"

"ಇರಬಹುದು, ಅದು ನನಗೆ ಗೊತ್ತಿಲ್ಲ"

ಅದೇ ಆಸ್ಪತ್ರೆಯ ಇನ್ನೊಬ್ಬ ವೈದ್ಯ, ಹಾಗೂ ಮತ್ತೊಬ್ಬ ನರ್ಸ್ ಹೇಳಿದ್ದರ ಸಾರಾಂಶ ಹೀಗಿತ್ತು. "ತಮಗೆ ತಿಳಿದಂತೆ ವೈದ್ಯ ಜಾನಕೀರಮಣಿ ಡ್ಯೂಟಿ ಕಾನ್‌ಷಿಯಸ್ ಅಲ್ಲ. ತುಂಬಾ ಸೋಮಾರಿ, ಎಷ್ಟೋ ಸಲ ರೋಗಿಗಳು ಸೀರಿಯಸ್ ಆಗಿದ್ದರೂ, ತಮ್ಮ ನಿಧಾನಗತಿಯಲ್ಲೇ ಆಕಳಿಸಿ. ಯೋಚಿಸಿ, ಏನೋ ಮಾಡಿದ್ರಾಯ್ತು ಅತ್ಲಾಗಿ, ಎನ್ನುವಂತೆಯೇ ಕೆಲಸ ಮಾಡೋದು ಅವರ ಸ್ವಭಾವ"

"ವೈದ್ಯರ ಈ ಆಲಸ್ಯ, ದಯಾಕರನ ಕೃತ್ಯಕ್ಕೆ ಸಂಪೂರ್ಣ ಸಹಾಯ ಮಾಡಿತು" ಪಬ್ಲಿಕ್ ಪ್ರಾಸಿಕ್ಯೂಟರ್ ತಮ್ಮ ವಾದ ಸರಣಿಯ ಕೊಂಡಿ ಹಿಡಿದು ಹೇಳಿದರು, "ಇದು ಅನ್‌ನ್ಯಾಚುರಲ್ ಡೆತ್ ಎಂದು ಅಲ್ಲಿ ತಿಳಿಯು ಪಡಿಸಿದ್ದರೆ, ಈಗಿನ ಕತೆಯನ್ನೇ ಹೇಳಿ ಇನ್ನೂ ಸ್ವಲ್ಪ ದುಡ್ಡು ಕೊಟ್ಟು, ಹಣ ಹಿಂದೆ ಪಡೆದು ದಾರಿಯಲ್ಲಿ ಎಲ್ಲಾದರೂ ಎಸೆದುಬಿಡುತ್ತಿದ್ದರೋ ಏನೋ, ಆದರೆ ಜಾನಕೀರಮಣ್ ತಮಗೇ ತಿಳಿಯದೇ ಅವನಿಗೆ ಧೈರ್ಯ ತುಂಬಿಸಿದರು. ಅವರ ಹಾಗೇ ರಾಘವಪ್ಪನೂ ನಂಬಿ. ವಿಶ್ವಾಸ, ಕೃತಜ್ಞತೆ ಗಳಿಂದ ಬಹುಮಾನವನ್ನೇ ಕೊಡಬಹುದೆನ್ನುವ ಆಸೆ ಹೊತ್ತು, ಕೊಲೆ ಮಾಡಿದ ಹೆಣವನ್ನು ರಾಘವಪ್ಪನಲ್ಲಿಗೆ ತಂದು ಹಾಕಿದ್ದಾರೆ, ಈ ದಂಪತಿ ಗಳು ರಾಘವಪ್ಪನ ವ್ಯಕ್ತಿತ್ವ, ಆ ಮುಖದ ಲಕ್ಷಣ. ಮತ್ತು ತೇಜಸ್ಸು

ನೋಡಿದರೇ ಹೇಳಬಹುದು, ಅವರು ಸುಳ್ಳು ಹೇಳುವವರಲ್ಲ ಮತ್ತು ಕೇವಲ ಹತ್ತೇ ಹತ್ತು ಸಾವಿರ ರೂಪಾಯಿಗಾಗಿ ಕಟಕಟೆ ಹತ್ತುವವರೂ ಅಲ್ಲ ಎಂಬುದು, ಅವರ ವ್ಯಾಪಾರ ಚೆನ್ನಾಗಿ ನಡೆಯುತ್ತಿದೆ, ಬೆಡಗಿನೂರಿಗೆ ಅವರು ಬಂದು ಸೇರಿಕೊಂಡಿರುವುದೂ ಇತ್ತೀಚೆಗೆ. ಆದರೆ ಬೆಡಗಿನೂರಿಗೆ ಹೊಸ ಬರೇನಲ್ಲ, ವ್ಯಾಪಾರ ಎಲ್ಲಿ ಕುದುರಿದರೆ ಅಲ್ಲಿ ಕೆಲ ವರುಷ ನೆಲೆಸಿಬಿಡುವ ಸ್ವಭಾವದವರು. ಬೆಡಗಿನೂರಿನಲ್ಲಿ ಮೊದಲು 10 ವರ್ಷ ನೆಲೆಸಿ ಆಮೇಲೆ ಬೇರೆ ಊರುಗಳಿಗೆ ಹೋದವರು. ಆದ್ದರಿಂದ ಇಲ್ಲಿ ಅವರ ಪರಿಚಯ ಇರುವವರು ಸಾಕಷ್ಟು ಮಂದಿ ಇದ್ದಾರೆ, ಅಕ್ಕಪಕ್ಕದ ಮನೆಯವರಿಗೆ ಇವರ ವ್ಯಾಪಾರ. ಗುಣ, ನಡತೆಗಳ ಬಗ್ಗೆ ಸ್ವಲ್ಪವೂ ತಿಳಿದಿಲ್ಲ ಎನ್ನುವುದು ನಿಜ. ಇಲ್ಲಿಯ ಜನಸಂಖ್ಯೆಯ ಶೇಕಡ ಐವತ್ತಕ್ಕೆ, ತಮ್ಮ ತಮ್ಮದೇ ಸಂಸಾರದ ಹೊರೆ ಹೊರಲಾಗದಷ್ಟು. ಅಕ್ಕಪಕ್ಕದವರ ಬಗ್ಗೆ ತಿಳಿದುಕೊಳ್ಳುವ ಆಸಕ್ತಿ ಇರಲ್ಲ ಅಥವಾ ಇದ್ದರೂ ಪುರುಸೊತ್ತು ಇರಲಿಲ್ಲ. ಆದರೆ ಇವರು ಮೋಸಗಾರರಾಗಿದ್ದರೆ ಇವರ ಒಳ್ಳೆಯತನದ ಕವಚ ಕಳಚಿಬಿದ್ದು ಮೋಸ ಗಾರಿಕೆಯ ಅರಿವು ಯಾರಾದರೂ ಒಬ್ಬರಿಗಾದರೂ ಆಗುತ್ತಿತ್ತು, ಆದರೆ ರಾಘವಪ್ಪ ಮುರುಕಿನಮನಿ ದುಷ್ಟಶಕ್ತಿ ಅಲ್ಲದ್ದರಿಂದ ಅವರು ಬೇರೆಯವರ ಆಸಕ್ತಿ ತಮ್ಮೆಡೆ ಎಳೆಯಲಿಲ್ಲ ಇಷ್ಟು ದಿನಗಳಲ್ಲಿ, ಇವೆಲ್ಲವನ್ನೂ ಕೂಲಂಕುಶ ವಾಗಿ ಗಮನಿಸಿದರೆ, ದಯಾಕರನೇ ಕೊಲೆ ಮಾಡಿದ್ದನೆಂಬುದು ನಿಸ್ಸಂಶಯ ವೆನಿಸುತ್ತದೆ, "ಪೋಲೀಸ್‌ರಿಂದ ಸಾಕ್ಷಿ, ದಾಖಲೆಗಳನ್ನು ಪಡೆದು ಪಿ. ಪಿ, ಪ್ರಕರಣದ, ನಿಜವನ್ನು ಕಂಡುಹಿಡಿಯ ಹೊರಟ ಪಬ್ಲಿಕ್ ಪ್ರಾಸಿಕ್ಯೂಟರ್ ಧೃಡ ಧ್ವನಿಯಲ್ಲಿ ಕೂಗಿ ಹೇಳಿದರು.

ಅನುಭವಿ ರಾಜಾರಾಯರು ಕಿಂಚಿತ್ತೂ ವಿಚಲಿತರಾಗಲಿಲ್ಲ, ಇಂಥ ಏಷ್ಟೋ ಪ್ರಕರಣಗಳ ಮೇಲೆ ಗೆಲುವು ಗಳಿಸಿಕೊಟ್ಟ ಧೀಮಂತನಿಗೆ, ಈ ಸರಿ ಯಾದ ಆಧಾರವಿಲ್ಲದೇ ಮುಂದುವರಿಯುತ್ತಿರುವ ಪ್ರಕರಣದ ಬಗ್ಗೆ ಯಾವ ಭಯ ? ಗಂಭೀರವಾಗಿಯೇ ತಮ್ಮ ವಾಗ್ಯುದ್ಧ ಆರಂಭಿಸಿದರು. ಸಾಕ್ಷಿಗಳ ಹೇಳಿಕೆಯನ್ನು ಸಂಗ್ರಹಿಸಿ.

"ಡಾ। ಚಿದಾನಂದರ ವರದಿಯಲ್ಲಿ, ಸುರೇಶನಿಗೆ ಮೂರ್ಛೆ ರೋಗ

ಇಲ್ಲ ಎಂದೇನೂ ಇಲ್ಲವಲ್ಲ, ಆದರೆ ಅವರು ತಿಳಿಸಿರುವ ಹಾಗೆ ಶೇಕಡಾ ಒಂದಂಶ ಅಲ್ಲ, ಇನ್ನೂ ಹೆಚ್ಚು, 50 ಅಂಶದಷ್ಟು ಮೂರ್ಛೆರೋಗ, ಜೋರಾಗಿಯೇ ಬಂದು ಆಕ್ರಮಿಸಿ ಆ ಹುಡುಗ, ಅಂದರೆ ಸುರೇಶ ಮುರುಕಿನ ಮನಿ ಬಿದ್ದಿದ್ದು ಕಾಲು ದಾರಿಯ ದಡದ ಮೇಲೆ, ಉದ್ದಕ್ಕೂ ಹಾಕಿರುವ ಕಲ್ಲಿನಂಚಿನ ಮೇಲೆ ರಭಸದಿಂದ ಕುಸಿದಾಗ, ಕಲ್ಲಿನ ಅಗಲ ಅಂಚು ರಪ್ಪನೆ ತಲೆಗೆ ಬಡಿದು ಒಳಗೆ ಪೆಟ್ಟಾಗಿದೆ, ಅಮೇಲೆ ಅವನನ್ನು ಕಂಡ ಗುರುರಾಜ್ ಮತ್ತಿತರರು, ಫುಟ್‌ಪಾತ್‌ನ ಕೊನೆಯಲ್ಲಿ ಜೋತಾಡಿದಂತಿದ್ದ ತಲೆಯನ್ನು ಮಣ್ಣಿನ ಮೇಲೆ ಸರಿಸಿದಾಗ, ಸುರೇಶ ಮಗ್ಗುಲಾಗಿದ್ದಾನೆ, ತಮಗೆ ತಿಳಿದಂಥ ಉಪಶಮನದ ಉಪಚಾರಗಳೆಲ್ಲ ಅವರು ಮಾಡಿದ್ದಾರೆ, ಅಲ್ಲಿಂದ ಪಾರ್ಕ್ ದಾಟಿ. ಆಚೆ ಮನೆಯಿಂದ ನೀರೂ ಕುಡಿಸಿ. ಸಿಂಪಡಿಸಿ ನೋಡಿದ್ದಾರೆ, ಆ ಒಂದು ಮನೆಯವರು ನೀರು ಕೊಟ್ಟಿರುವುದೂ ಇದಕ್ಕೆ ಸಾಕ್ಷಿ".

"ಯುವರ್ ಹಾನರ್, ನೀರು ಕೊಟ್ಟಾಕ್ಷಣ ಫಿಟ್ಸ್ ಬಂದಿತ್ತು ಅಥವಾ ಅನ್‌ಕಾನ್‌ಷಿಯಸ್ ಆಗಿದ್ದ ಎಂದು ಹೇಳಲಾಗಲ್ಲ, ತಲೆನೋವಿನಿಂದ ಮುಲುಗುವ ಹುಡುಗನಿಗೆ, ಫಿಟ್ಸ್ ಖಾಯಿಲೆಯ ಹೊದಿಕೆ ಹಾಕಿ ನೀರು ತಂದು ಕೊಟ್ಟಿದ್ದಾರೆ. ನೀರು ಕೊಟ್ಟ ಆ ಮನೆಯವರೇನು ಬಿದ್ದ ಹುಡುಗ ನನ್ನು ಏನಾಗಿದೆ ಎಂದು ಬಂದು ನೋಡಿಲ್ಲವಲ್ಲ"? ಪಿ.ಪಿ. ವಾದಿಸಿದರು,

"ಇಲ್ಲ, ಬರಲು ಅಲ್ಲಿಯ ನಿರ್ಜನತೆ, ಕತ್ತಲುಗಳ ಭಯ. ಇರಲಿ, ಮುಂದೆ ದಯಾಕರ ಮತ್ತು ಗುರುರಾಜ್ ಹೇಳಿದ್ದೆಲ್ಲ ನಿಜ. ಆಸ್ಪತ್ರೆಯ ವೈದ್ಯ ಮತ್ತು ಕೆಲಸಗಾರರು ನಡೆದದ್ದನ್ನು, ನಡೆದಂತೆ ಈಗಾಗಲೇ ತಿಳಿಸಿದ್ದಾರೆ, ದಯಾಕರ ಕೊಲೆ ಮಾಡಿದ್ದರೆ ವೈದ್ಯಕೀಯ ಪರೀಕ್ಷೆಗೆ ಹೆಣವನ್ನು ಕೊಂಡೊಯ್ಯುವ ದಡ್ಡತನ ಮಾಡುತ್ತಿರಲಿಲ್ಲ. ರಾಘವಪ್ಪನ ಮನೆಗೆ ವಾಪಸ್ ತೆಗೆದುಕೊಂಡು ಹೋಗಿ ಹೆಣ ಮುಟ್ಟಿಸಿ ಬಿಡುವ ಧೈರ್ಯವೂ ಆಗುತ್ತಿರಲಿಲ್ಲ. ತಲೆಗೆ ಬಿದ್ದ ಬಲವಾದ ಮೂಕೇಟು ಸುರೇಶನ ಪ್ರಾಣ ತಿಂದಿದೆ. ಕಾರಿನಿಂದ ಕೆಳಗಿಳಿಸಿದ ಮೇಲೆ ಯಾವಾಗಲೋ. ಕಾರಿನಲ್ಲಿ ದೀಪ ಇರಲಿಲ್ಲ, ಆದ್ದರಿಂದ ಕಾರನ್ನು ಡ್ರೈವ್ ಮಾಡುತ್ತಿದ್ದ ದಯಾಕರ ನಾಗಲೀ, ಮುಂದೆ ಅವರ ಪಕ್ಕದಲ್ಲಿ ಕೂತ ಸುಮಾರವರಾಗಲೀ, ಅವನ

ಸಣ್ಣ ಉಸಿರಾಟ ಗಮನಿಸುವುದು ಅಸಾಧ್ಯ. ಸುಮ್ಮನೆ ಮಲಗಿದಂತೆ ಕಾಣುವ ಸುರೇಶನನ್ನು ಆಗಾಗ ನೋಡುತ್ತಿದ್ದ ಗುರುರಾಜರ ಕಣ್ಣಿಗೂ ಸುರೇಶನ ಮುಖದಲ್ಲಿ ಯಾವ ಏರಿಳಿತವಾಗಲೀ, ಬದಲಾವಣೆಗಳಾಗಲೀ ಗುರುತಿಸಲಾಗಿಲ್ಲ, ಇದು ಅಸಹಜವೂ ಅಲ್ಲ, ಗುರುರಾಜರ ಹೆಂಡತಿ ಆ ದಿನ ಊರಿಗೆ ಹೊರಟದ್ದು ನಿಜ. ಇದು ಆ ದಿನ ಪ್ರಯಾಣ ಹೊರಟ ಸೀಟ್ ಬುಕ್ ಮಾಡಿಸಿದವರ ಪಟ್ಟಿಯಲ್ಲಿ ನೋಡಿದರೆ ತಿಳಿಯುತ್ತದೆ, ರಾತ್ರಿ 9.30ರ ಟ್ರೈನ್‌ನಲ್ಲಿ ಗುರುರಾಜ್‌ರವರ ಹೆಂಡತಿ ಮೀನ ಧಾರವಾಡಕ್ಕೆ ಹೊರಟಿದ್ದು,

"ನೋ ನೋ, ಅಸಂಬದ್ಧ ವಾದ ಇದು. ರಿಸರ್ವೇಷನ್ ಲಿಸ್ಟ್‌ನಲ್ಲಿ ಬರೀ ಹೆಸರು ಮತ್ತು ವಯಸ್ಸು ಮಾತ್ರವೇ ಇದೆ. ಅದನ್ನು ನಾನೂ ನೋಡಿದ್ದೇನೆ. 40 ವರ್ಷವಾದವರು, ಮೀನ ಎನ್ನುವ ಹೆಸರಿನವರು ಬೇಕಾದಷ್ಟು ಜನರಿದ್ದಾರೆ, ಎ ವೆರಿ ಕಾಮನ್ ನೇಮ್ ಇಟ್ ಈಸ್. ಅದು ಯಾರದ್ದಾದರೂ ಆಗಿರಬಹುದು, ಅಲ್ಲೇನು ಪೂರ್ಣ ವಿಳಾಸವಿಲ್ಲ. ವೈಫ್ ಆಫ್ ಗುರ‍್ರಾಜ್ ಎಂದೂ ಬರೆಸಿಲ್ಲ". ರಾಘವಪ್ಪ ಮುರ್ಕಿನ ಮನಿಯ ಪರ ವಾದಿಸಲು ನಿಂತ ಪಬ್ಲಿಕ್ ಪ್ರಾಸಿಕ್ಯೂಟರ್ ಖಂಡಿಸಿ ಹೇಳಿದರು.

"ಪಬ್ಲಿಕ್ ಪ್ರಾಸಿಕ್ಯೂಟರ್‌ರವರ ವಾದ ಒಪ್ಪಲಾಗಿದೆ, ನ್ಯಾಯಾಧೀಶರು ರಾಜಾರಾಯರು ಕೊಟ್ಟ ಲಿಸ್ಟ್ ನೋಡಿ ತಿಳಿಸಿದರು.

"ಗುರುರಾಜ್, ದಯಾಕರ್–ದಪಂತಿಗಳೊಡನೆ ಆ ದಿನವೇ ಕಾರಿನಲ್ಲಿ ಹೋಗಿದ್ದರೆಂದೂ, ಆಮೇಲೆ ಹುಟ್ಟಿಕೊಂಡ ಸಾಕ್ಷಿ ಅಲ್ಲವೆಂದೂ, ಆದಿನ ರಾತ್ರಿ ಯಾಕೆ ಅವರ ಜೊತೆ ಕೃಷ್ಣನಗರಕ್ಕೆ ಹೋಗಲಿಲ್ಲವೆಂಬುದಕ್ಕೆ ಇದೇ ಕಾರಣವೆಂದೂ, ಮನದಟ್ಟಾಗಲು ಹೇಳುತ್ತಿದ್ದೇನೆ ಅಷ್ಟೆ" ಎಂದ ರಾಜಾ ರಾಯರು ಸುತ್ತಲೂ ಒಮ್ಮೆ ನೋಡಿ ಮತ್ತೆ ಮುಂದುವರಿಸಿದರು. "ಸುರೇಶ್ ಮುರ್ಕಿನಮನಿ ತಮ್ಮ ಮಗನೇ" ? ಎಂದು ದಯಾಕರ್ ಆ ದಿನ ರಾಘವಪ್ಪ ಮುರ್ಕಿನಮನಿಯ ಮನೆಗೆ ಬಂದು ಕೇಳಿದಾಗ, ಅದೇ ಅಡ್ಡ ಹೆಸರಿರುವ ಕುಬುದ್ಧಿಯ ತಲೆಯಲ್ಲಿ ಹೊಸ ಮಿಂಚು. ಹ್ಞಾ, ಇವನಿಂದ

ಯಾಕೆ ದುಡ್ದು ಎಳೀಬಾರ್ದು ಅಂತ. ಹೊರಗಿನ ಕಿಟಕಿಯಿಂದ ಕಾರು ಕಣ್ಣಿಗೆ ಬಿತ್ತು. ಕಾರಲ್ಲಿ ಬಂದಿರುವ ದಂಪತಿಗಳ ಬಳಿ ದುಡ್ಡಿಲ್ಲದೇ ಇರೋಲ್ಲ ಎನ್ನುವ ಅನಿಸಿಕೆ. ದಯಾಕರ ಆ ದಿನವೇ ಚೌಕಾಶಿ ಮಾಡಿದ್ದರೆ ಅವರಿಂದ ಒಂದೆರಡು ಸಾವಿರ ಪಡೆದು, ಹೆಣವನ್ನು ಕೇಳಿದವರಿಂದಲೂ ಆ ಮೇಲೆ ಇನ್ನೆರಡು ಸಾವಿರ ಕಿತ್ತುಕೊಳ್ಳುತ್ತಿದ್ದರೋ ಏನೋ", ಆದರೆ ದಯಾಕರ ಬಿಡಿಗಾಸೂ ಕೊಡಲೊಪ್ಪಲಿಲ್ಲ."

"ಶ್ರೀಮಂತಿಕೆಯ ಸೋಗು ಹಾಕುತ್ತಲೇ ಆಡಂಬರದ ಬಾಳುವೆ ನಡೆಸಿದ ಬಡವ ಈ ರಾಘವಪ್ಪ, ಎಲ್ಲ ಮೋಸದ ಹಣ. ಹೆಣದ ಜೇಬಿನಲ್ಲಿ 10.000 ರೂ. ಇತ್ತು ಎಂದ. ದುಡಿಯುವ ವಯಸ್ಸಿಗೆ ಬಂದ ಹುಡುಗ ನೆಂದೂ, ತನ್ನ ಮಗನೇ ಎಂದೂ, ಹೇಳಿ, ಕೊಲೆಗೆ ಕಾರಣರಾದವರಿಂದ 35,000 ರೂ,ಪರಿಹಾರ ಕೊಡಿಸಲು ಬೇಡಿದ".

"ಅವರ ಮಗಳು ರಾಣಿ, ಅವರ ಗೆಳೆಯ ಜಾರ್ಜ್ ಇವರಿಬ್ಬರೂ ರಾಘವಪ್ಪನ ಮಾತನ್ನು ಅರ್ಥಮಾಡಿಕೊಂಡು, ಅದರಂತೇ ತಮ್ಮ ಜಾಣ್ಮೆನ ವನ್ನು ಬಳಸಿ, ಅನುಸರಿಸಿ, ಸಂದರ್ಭೋಚಿತ ಲಾಭ ಪಡೆಯಲು ಸದಾ ಸಹಕರಿಸುತ್ತಿರುವ ಜಾಣರು. "ನಿಮ್ಮ ಮಗನ ಬಾಡಿ......." ಎಂದು ದಯಾಕರ ತಿಳಿಸಿದ ಕೂಡಲೇ ರಾಘವಪ್ಪ ಮಗಳ ಕಡೆ ತೀವ್ರ ದುಃಖದಿಂದ ನೋಡಿ ಎರಡೂ ಕಣ್ಣುಗಳನ್ನು ಒತ್ತಿ, ನಿಟ್ಟುಸಿರಿಟ್ಟು, ಸನ್ನೆ ಮಾಡಿದ. ಎರಡೂ ಕಣ್ಣು ರೆಪ್ಪೆ ಒತ್ತಿಕೊಂಡದ್ದು ತಲೆಗೆ ಕೈಕೊಟ್ಟುಕೊಂಡದ್ದು ದುಃಖ ದಿಂದ ಎಂದು ದಯಾಕರ ತಿಳಿದ. ಆದರೆ ಆ ಸಂಜ್ಞೆಯ ಅರ್ಥ ತಿಳಿದ ಜಾಣ ಮಗಳು, ಬಹುಶಃ ತನ್ನ ಮನೆಯಲ್ಲಿದ್ದ ಸುರೇಶ ಸತ್ತನೆಂಬ ಸುದ್ದಿಗೆ ನಿಜಕ್ಕೂ ಶಾಕ್ ಆಗಿರಲೂಬಹುದು, ಜೋರಾಗಿ ಕಿರುಚಿದಳು ಪ್ರಲಾಪಿ ಸಿದಳು. ಬಿಕ್ಕಿ ಬಿಕ್ಕಿ ಅತ್ತಳು.

2ನೇ ಸಲ, ಗುಂಪಿನಲ್ಲಿ ಜಾರ್ಜ್ ಕಂಡ ಕೂಡಲೇ ರಾಘವಪ್ಪ, ತಾನು ಅವನಿಗೆ ಹೇಳಬೇಕಾದುದನ್ನೆಲ್ಲ ತನ್ನೊಬ್ಬನಿಗೇ ಹೇಳಿಕೊಳ್ಳುವಂತೆ ಬಡ ಬಡಿಸಿದ",

"ಜಾರ್ಜ್‌ನನ್ನು ನೋಡಿ ಅಲ್ಲಾ, ದುಃಖದಿಂದ ತಲೆ ಕೆಟ್ಟು ಬಡ

ಬಡಿಸಿದ್ದು. ಯಾರಿಗೇ ಆಗಲಿ ಸ್ವಂತ ಮಗನ ಸಾವು......ತಲೆ ಕೆಡಿಸೋದು ಸಹಜ" ಪಬ್ಲಿಕ್ ಪ್ರಾಸಿಕ್ಯೂಟರ್ ಮಧ್ಯೆ ತಮ್ಮ ಬಾಯಿ ಹಾಕಿದರು.

"ಯಾರಿಗೆ ಯಾರು ಸ್ವಂತ ಮಗ ? ಅದೆಲ್ಲ ದುಃಖ ಬರೀ ಪ್ರದರ್ಶನ ಕೃಷ್ಟೆ, ಯಾರೂ ತನ್ನನ್ನು ಮೊದಲು ನೋಡಿರದಿದ್ದರಿಂದ, ಜಾರ್ಜ್ ಗುಂಪಿನಲ್ಲಿ ಸೇರಿ ಸುಮ್ಮನೇ ನಿಂತ. ನಿಂತು ರಾಘವಪ್ಪನ ಮಾತು ಕೇಳಿಸಿ ಕೊಂಡ, ರಾಜರಾಯರು ಮುಂದುವರಿಸಿದರು.

"ಸಂದರ್ಭವನ್ನು ಅರಿತುಕೊಂಡು ರಾಘವಪ್ಪನ ಸೂಚನೆಯಂತೆ ಗುಂಪು ತಳ್ಳಿ ಮುಂದೆ ಬಂದು, ತನ್ನ ಹೇಳಿಕೆ ಕೊಟ್ಟ ದಯಾಕರ ಕೊಲೆಗಾರ ಎನ್ನುವುದಕ್ಕೆ ಸರಿಯಾದ ಯಾವ ಆಧಾರವೂ" ಇಲ್ಲ.

ಪಿ. ಪಿ. "ಅದನ್ನೇ ಕಂಡುಕೊಳ್ಳಬೇಕು ಇನ್ನೂ ತನಿಖೆ ಮುಂದುವರಿಸ ಬೇಕು".

ಪತ್ರವೊಂದನ್ನು ನ್ಯಾಯಾಧೀಶರ ಮುಂದಿಡುತ್ತಾ ಹೇಳಿದರು ರಾಜಾ ರಾಯರು, "ಅಗತ್ಯವಿಲ್ಲ, ಏಕೆಂದರೆ ರಾಘವಪ್ಪ ಮೋಸಗಾರ ಎನ್ನುವುದಕ್ಕೆ ಸಾಕ್ಷಿ ಇದೆ ಬೆಳಗಾವಿಯ ಜೈಲಿನಿಂದ ಬಂದ ಪತ್ರ ನಿಮಗೆ ಇದನ್ನು ತಿಳಿಸಿ ಕೊಡುತ್ತದೆ ನೋಡಿ ಇದನ್ನು ಆಮೇಲೆ...ಸುರೇಶ್ ಮುರುಕಿನ ಮನಿ ರಾಘವಪ್ಪನ ಮಗನೇ ಅಲ್ಲ, ಮಗನಲ್ಲದವನನ್ನು ಮಗ ಎಂದು ಹೇಳಿ 35,000 ರೂ. ಪರಿಹಾರ ಬೇಡಿದ ಮಹಾ ಸುಳ್ಳ ರಾಘವಪ್ಪ, ವ್ಯಾಪಾರಿ ರಾಮಪ್ಪನ ಬಳಿ 10,000 ರೂ ತೆಗೆದುಕೊಂಡಿದ್ದ ವಿಷಯ ಮಾತ್ರ ನಿಜ. "ಇವತ್ತೇ ಕೊಡುತ್ತೇನೆ" ಎಂದು ಅವರು ವಾಪಸ್ ಹಣ ಕೇಳಿದಾಗಲೆಲ್ಲ ಹೇಳುತ್ತಿದ್ದುದು ಇದೇ ಮಾತು ಎಂದು ಅದೇ ರಾಮಪ್ಪನೇ ಹೇಳಿದ್ದಾರೆ ಈಗ, ಅದರಂತೆ ಅಂದೂ ಹೇಳಿದ್ದ".

"ಯುವರ್ ಹಾನರ್. ಸುರೇಶ್ ಮುರುಕಿನ ಮನಿಯ ನಿಜವಾದ ತಂದೆ ವಿ. ಆರ್. ಮುರುಕಿನ ಮನಿಯವರು, ಅವರನ್ನು ಕಟಕಟೆಯ ಮೇಲೆ ಕರೆದು ಪ್ರಶ್ನಿಸಲು ತಾವು ಪರವಾನಗಿ ಕೊಡಬೇಕು" ರಾಜಾರಾಯರು ಈ ಮಾತು ಹೇಳುವಾಗ, ಇಷ್ಟು ದಿನ ಗುಟ್ಟಾಗೇ ಇಟ್ಟಿದ್ದ ಈ ಸತ್ಯ ಈಗ

ಎಲ್ಲರಿಗೂ ತಿಳಿದು ಎರಡೂ ಗುಂಪುಗಳ ಬಾಯಿ, ಕಿವಿಗಳು ಅರಳಿ ನಿಂತವು, "ಅರೆ ಈ ವಕೀಲರು ತಮಗೆ ತಿಳಿಸಲೇ ಇಲ್ಲವಲ್ಲ ಈ ವಿಷಯ" ಎಂದು ದಯಾಕರನ ಪಾರ್ಟಿಗೆ ಸಂತೋಷಾಶ್ಚರ್ಯ. "ಹೊಹ್, ಈ ಸುಳ್ಳು ಹೊರಬಂದದ್ದು ಹೇಗೆ ? ಯಾರು ಹೇಳಿದರು"? ಎನ್ನುವ ಆಶ್ಚರ್ಯ. ಗಾಬರಿ ರಾಘವಪ್ಪನ ಮನೆ ಬಳಗಕ್ಕೆ, ಅವನ ಪರವಾದಿಸಿ ಹಣ ದುಡಿಯುವ ಯೋಜನೆಗೆ ಒಪ್ಪಿಕೊಂಡ ಪಬ್ಲಿಕ್ ವಕೀಲರಿಗೂ ಈಗಷ್ಟೇ ಈ ವಿಷಯ ತಿಳಿದು ತಬ್ಬಿಬ್ಬೋ ತಬ್ಬಿಬ್ಬು," ರ್ಯಾಸ್ಕಲ್, ರಾಘವಪ್ಪ, ತಮ್ಮ ಪೋಲೀಸರು, ವಕೀಲರೆದುರಿಗೇ ಹೀಗೆ ನಿಜವನ್ನು ಮುಚ್ಚಿಡೋದಾ ? ಸೇಫ್ಟಿ ಮೆಷರ್ ಅಂತ, ಬೆಡಗನೂರು ಮತ್ತು ಬೆಂಗಳೂರು, ಮೈಸೂರಿನ ಎರಡೂ ಪೋಲೀಸ್ ಕಛೇರಿಗಳಲ್ಲಿ ಇವನ ಹೆಸರೇನಾದರೂ ದಾಖಲಾಗಿದೆಯೇ ಎಂದು ವಿಚಾರಿಸಿ ನಿಲ್ ರಿಪೋರ್ಟ್ ತರಿಸಲಾಗಿತ್ತು, ಬೆಡಗಿನೂರಿನಲ್ಲಿ ತಾನು ಬದಲಾಯಿಸಿದ ಎಲ್ಲ ಮನೆಗಳ, 8 ವಿಳಾಸಗಳನ್ನು, ಮೈಸೂರಿನಲ್ಲಿ 4 ಮನೆಯ ವಿಳಾಸಗಳನ್ನು ಹೇಳಿದವ, ಬೆಳಗಾವಿಯಲ್ಲಿ ಮನೆ ಮಾಡಿದ್ದ ವಿಷಯದ ಬಗ್ಗೆ ಅಪ್ಪಿ ತಪ್ಪಿ ಕೂಡ ಪ್ರಸ್ತಾಪವೂ ಮಾಡಲಿಲ್ಲವಲ್ಲ ಈ ಖದೀಮ ? ಅಥವಾ ನಿಜವಾಗಲೂ ನಿಜವಲ್ಲವೇ ಇದು ? ಎಲ್ಲಾ ಬಚ್ಚಿಡದೇ ನಿಜ ಹೇಳಿದ್ದರೆ ಛೆ ; ಈ ಅವಮಾನ ತಪ್ಪುತ್ತಿತ್ತು. ಪ್ರಕರಣಕ್ಕೆ ಹೊಸ ಪಾತ್ರ ಕೊಟ್ಟು ಬೇರೆಡೆ ತಿರುಗಿಸಿಕೊಳ್ಳಬಹುದಿತ್ತು. ಓಹ್ ವಾಟ್ ಆ್ಯನ್ ಇನ್‌ಸಲ್ಟ್ ಫಾರ್ ದಿ ಪೋಲೀಸ್ ಡಿಪಾರ್ಟ್‌ಮೆಂಟ್ ಆಲ್ಸೊ," ಎನ್ನುವ ಸಿಟ್ಟು ಇನ್‌ವೆಸ್ಟಿಗೇಷನ್ ಆಫೀಸರ್ ಮತ್ತು ಪಬ್ಲಿಕ್ ಪ್ರಾಸಿಕ್ಯೂಟರ್ ರವರಿಗೆ,

ವಿ, ಆರ್. ಮುರುಕಿನ ಮನಿಯುವರನ್ನು ಆದಾರೋ ಕರೆತಂದು, ಸಾಕ್ಷಿ ಕಟ್ಟೆಯ ಮೇಲೆ ನಿಲ್ಲಿಸಿದರು, ಚಲನೆ ಕಳಕೊಂಡಂತಿದ್ದ ಎಡಕೈಯನ್ನು ಎದೆಯೆತ್ತರಕ್ಕೆ ಹಿಡಿದುಕೊಂಡು, ನಿಧಾನವಾಗಿ ಕಾಲೆಳೆಯುತ್ತಾ ನಡೆದು, ಬಂದು ಕಟಕಟೆ ಏರಿದರು ವಿ, ಆರ್. ಮುರುಕಿನ ಮನಿಯುವರು.

"ವಿ. ಆರ್. ಮುರ್ಕಿನ ಮನೆಯುವರೇ ಸುರೇಶ ನಿಮ್ಮ ಮಗ ತಾನೇ"? ರಾಜಾರಾಯರು ಪ್ರಶ್ನಿಸಿದರು.

"ಹೌದು"

"ಅವನು ಈ ಊರಲ್ಲಿ ಸತ್ತದ್ದು ನಿಮಗೆ ತಿಳಿಯಲಿಲ್ಲ ಹೇಗೆ? ಅವನು ಸತ್ತು ಮೂರು ತಿಂಗಳಾದರೂ ಮಗ ಮನೆಯಲ್ಲಿ ಇಲ್ಲ ಎನ್ನುವುದೂ ನಿಮಗೆ ಯಾಕೆ ಗೊತ್ತಾಗಲಿಲ್ಲ?"

"ನಾವು ಇರುವುದು ಇಲ್ಲಿಂದ ನಲವತ್ತು ಮೈಲು ದೂರದಲ್ಲಿರುವ ಶ್ಯಾಮಾಪುರದಲ್ಲಿ, ಸುರೇಶ್ ಎಸ್.ಎಸ್.ಎಲ್.ಸಿ. ಪಾಸ್ ಆದ ಮೇಲೆ, ನಮ್ಮ ಹಳ್ಳಿಯಲ್ಲಿ ಕಾಲೇಜ್ ಇಲ್ಲ ಅಂತ ಈ ಊರಿನ ಫೇಮಸ್ ಕಾಲೇಜ್ ನಲ್ಲಿ ಪಿ.ಯು.ಸಿ.ಗೆ ಸೇರಿಸಿದೆ." ತುಂಬ ಆಯಾಸಪಡುವವರಂತೆ ಶಬ್ದ ಗಳನ್ನು ಜೋಡಿಸಿ ಜೋಡಿಸಿ ಹೇಳುವಂತೆ ನಿಧಾನವಾಗಿ ಹೇಳಿದರು. ವಿ. ಆರ್. ಮುರ್ಕಿನಮನಿ, "ರಾಘವಪ್ಪ ಮುರ್ಕಿನಮನಿ ನಮಗೆ ದೂರದ ದಾಯಾದಿ ಸಂಬಂಧಿ, ಈ ಊರಿನಲ್ಲಿ ನನಗೆ ಪರಿಚಯವಿದ್ದುದು ಅವರೊಬ್ಬರದೇ. ಆಗ ಆ ಸಮಯದಲ್ಲಿ ಹಾಗೆಂದೇ ಸುರೇಶನನ್ನು ಅವರ ಮನೆಯಲ್ಲಿ ಬಿಟ್ಟಿದ್ದೆ ಮೊದ್ಲು ಈ ಊರಿಗೆ ಬಂದಾಗ.

"ಅವರ ಮನೆಯಲ್ಲೇ ಇದ್ದದ್ದು ಸುರೇಶ ಹಾಗಾದ್ರೆ ಮೊದ್ಲು"

"ಹೌದು, ಅವರ ಮನೆಯಲ್ಲಿ ಅವನು ಒಂದೂವರೆ ತಿಂಗಳಿದ್ದ. ಆಮೇಲೆ ಮಾರುತಿ ಗುಡ್ಡದಲ್ಲಿರುವ ಹನುಮಂತಪ್ಪನ ರೂಮನ್ನು ಬಾಡಿಗೆಗೆ ಹಿಡಿದು, ಅಲ್ಲಿಗೆ ಹೋಗಿದ್ದ".

"ರೂಂ ಬದಲಾಯಿಸಿದ್ದೇಕೆ?"

"ಒಂದು ಕಾರಣ, ಸಂಬಂಧಿಗಳ ಮನೆಯಲ್ಲಿರೋದು ಬೇಡ, ಅವ್ರಿಗೆ ತೊಂದರೆ ಆಗಬಹುದು ಎಂದು. ಇನ್ನೊಂದು ಕಾರಣ, ಸುರೇಶ್‌ನ ಕಾಲೇಜ್ ಇರೋದು ಸುಶೀಲ ನಗರದಲ್ಲಿ, ರಾಘವಪ್ಪ ಮುರ್ಕಿನಮನಿಯ ಮನೆಯಿಂದ ಹನ್ನೆರಡು ಕಿ.ಮೀ. ದೂರದಲ್ಲಿ, ಮಾರುತಿ ಗುಡ್ಡದಿಂದ ಅವನ ಕಾಲೇಜ್‌ಗೆ ಕೇವಲ ಒಂದು ಕಿ. ಮೀ. ದೂರ ಮಾತ್ರ. ಕಾಲೇಜ್ ದೂರವಾಗುತ್ತೆ ಎನ್ನುವ ಕಾರಣ ಹೇಳಿಯೇ ಅವನು ಇವರ ಮನೆ ಬಿಟ್ಟು, ಮಾರುತಿ ಗುಡ್ಡದಲ್ಲಿ ರೂಂ ಮಾಡಿದ್ದು" ಹೊಸ ಸಾಕ್ಷಿಯ ಆಗಮನದಿಂದ ವಾಗ್ವಾದದ ಸಮಯ ಮತ್ತಷ್ಟು ಉದ್ದವಾಗುತ್ತ ಹೋಗಿತ್ತು.

"ಸುರೇಶ್ ಎಷ್ಟು ದಿನಕ್ಕೊಮ್ಮೆ ನಿಮ್ಮನ್ನು ಕಾಣಲು ಮನೆಗೆ ಬರುತ್ತಿದ್ದ?"

"ಹೀಗೆ ಅಂತ ಇಲ್ಲ, ರಜೆಗಳು ಹೆಚ್ಚು ಇದ್ದಾಗಲೆಲ್ಲ ಬರುತ್ತಿದ್ದ, ಪರೀಕ್ಷೆಯ ಮುಂದೆ ರಜಾ ಸಿಕ್ಕರೆ, ಓದಿಕೊಳ್ಳಲೆಂದು ರೂಮಿನಲ್ಲೇ ಉಳಿಯುತ್ತಿದ್ದುದೂ ಉಂಟು. ಏನೇ ಆದರೂ ಎರಡು ಮೂರು ತಿಂಗಳೊಳಗೆ ಕಡಿಮೆ ಎಂದರೆ ಒಮ್ಮೆಯಾದರೂ ಬರುತ್ತಿದ್ದ; ಎಂದ ವಿ. ಆರ್. ರವರು ಸ್ವಲ್ಪ ಸುಸ್ತಾದಂತೆ ಉಸಿರು ಬಿಟ್ಟು ಏನೋ ಹೇಳಲು ಹೋಗಿ, ಹೇಳದೇ ಹಾಗೇ ನಿಂತು ಬಿಟ್ಟರು. ಸ್ವಲ್ಪ ಸಮಯ ಕೊಟ್ಟು, ಅವರು ಸುಧಾರಿಸಿಕೊಂಡ ಮೇಲೆ ರಾಜಾರಾಯರು ಕೇಳಿದರು.

"ಸುರೇಶ್ ಸಾಯುವ ಮುನ್ನ ನಿಮ್ಮ ಹಳ್ಳಿಗೆ ಯಾವಾಗ ಬಂದಿದ್ದು?"

"ಮೇ 30ಕ್ಕೆ ಅವನು ಹೋಗಿದ್ದು ಎಂದು ನೀವೇ ಹೇಳಿದಿರಲ್ಲ, ಅದಕ್ಕೆ 3 ತಿಂಗಳ ಮೊದಲು ಮನೆಗೆ ಬಂದು ಇನ್ನೊಂದು ಹದಿನೈದು ಇಪ್ಪತ್ತು ದಿನಗಳೊಳಗೆ ಬರುತ್ತೇನೆ ಎಂದು ಹೇಳಿ ಹೋಗಿದ್ದ. ಆದರೆ ಮೂರು ತಿಂಗಳಾದ್ರೂ ಬರಲಿಲ್ಲ. ಪತ್ರವಾದರೂ ಬರೆಯುವವ, ಈ ಸಲ ಅದೂ ಇಲ್ಲ. ಅವನೂ ಇಲ್ಲ, ಪತ್ರವೂ ಇಲ್ಲ. ಇವೊತ್ತು ಬರಬಹುದು, ಇವತ್ತು ಅವನೇ ಬರಬಹುದು ಅಥವಾ ಪತ್ರವಾದರೂ ಬರಬಹುದು ಎಂದು ದಿನೇ ದಿನೇ ಕಾದು ಕಾದು ಸುಸ್ತಾಗಿ, ನಾನೇ ಇಲ್ಲಿ ನೋಡಿಕೊಂಡು ಹೋಗೋಣವೆಂದು ಬಂದೆ. ಇಲ್ಲಿ ಬಂದ ಮೇಲೆ ತಿಳಿಯಿತು ಅವನು ಪರೀಕ್ಷೆಗೂ ಹೋಗಿಲ್ಲ, ರೂಮಿನಲ್ಲೂ ಇಲ್ಲ, ಹಳ್ಳಿಗೂ ಬರಲಿಲ್ಲ ಎನ್ನುವ ವಿಷಯ. ರೂಮಿನ ಯಜಮಾನ ನನ್ನನ್ನು ನೋಡಿರಲಿಲ್ಲ ಮೊದಲು. ನಾನು ಸುರೇಶನ ಬಗ್ಗೆ ವಿಚಾರಿಸಿದಾಗ, "ನೋಡಿ ಅವನು 3 ತಿಂಗ್ಳಿಂದ ರೂಂನಲ್ಲಿಲ್ಲ, ಈ ರಜೆಯಲ್ಲಿ ಯಾಕೋ ಹೇಳದೇ ಕೇಳದೇ ಹಳ್ಳಿಗೆ ಹೋಗಿದ್ದಾನೆ ಅನಿಸುತ್ತೆ. ಎರಡ್ಡು ತಿಂಗ್ಳ ಬಾಡಿಗೇನೂ ಕೊಟ್ಟಿಲ್ಲ ರೂಂನದು. ಇಲ್ಲಿಯವರೆಗೆ ಯಾವಾಗ್ಲೂ ಹೀಗೆ ಮಾಡಿಲ್ಲ ಅವ್ನು" ಎಂದು ರೂಮಿನ ಮಾಲೀಕರು ತಿಳಿಸಿದಾಗ ನನಗೆ ಎಲ್ಲಿಲ್ಲದ ಗಾಭರಿ, ಅವನಿಗೆ ಫಿಟ್ಸ್ ಬೇರೆ ಇತ್ತು, ಈ ಊರಿನ ಶೀತ ಹವಾಮಾನದಿಂದಾಗಿಯೋ ಏನೋ ಅಂತೂ

ಸ್ವಲ್ಪ ಉಲ್ಬಣಗೊಂಡಿತ್ತು ಇತ್ತೀಚೆಗೆ. ಆದರೆ ಅವನು ತುಂಬಾ ಕೇರ್‌ಫುಲ್ ಇದ್ದ. ಈ ಬಗ್ಗೆ ಹಳ್ಳಿಗೆ ಯಾವಾಗ ಹೋಗ್ತೀನಿ, ರಜೆ ಯಾವಾಗಿನಿಂದ ಎಂಬುದರ ಬಗ್ಗೆ ಏನೂ ಹೇಳಲಿಲ್ವಾ ಹೋಗುವ ಮೊದಲು?" ಎಂದು ಇನ್ನೊಮ್ಮೆ ಕೇಳಿದೆ, ರೂಮಿನ ಯಜಮಾನರಿಗೆ.

"ಇನ್ನೊಂದು ವಾರದಲ್ಲಿ ಊರಿಗೆ ಹೋಗ್ತೀನಿ ಎಂದು ವಾರಕ್ಕೆ ಮುಂದೆ ಹೇಳಿದ್ದ. ಆಮೇಲೆ ಯಾವ ಊರಿಗೆ ಹೋದ, ಯಾವಾಗ ಹೋದ ಅನ್ನೋದು ಗೊತ್ತಾಗ್ಲಿಲ್ಲ. ಹೋಗುವಾಗ ತಿಳಿಸಿದ್ರೆ ತಾನೇ ಗೊತ್ತಾಗೋದು" ಎಂದು ಬೇಸರ ವ್ಯಕ್ತಪಡಿಸಿದರು ಅವರು. 2 ತಿಂಗಳ ಬಾಡಿಗೆಯನ್ನು ಕೊಟ್ಟ ನಾನು, ನನ್ನಲ್ಲೇ ಯೋಚಿಸಿಕೊಂಡೆ, ಊರಿಗೆ ಅಂದ್ರೆ ಎಲ್ಲಿ ಹೋಗಿರಬಹುದು? ಮನೆಗಂತೂ ಬಂದಿಲ್ಲವಲ್ಲ? ಯಾರಿಗೂ ಹೇಳದೇ ಇನ್ನೆಲ್ಲಿಗೋ......? ಅಥ್ವಾ ಯಾರಾದ್ರೂ ಹುಡುಗಿಯ ಜೊತೆ? ಛೆ... ಅವನು ಹಾಗೆ ಮಾಡುವುದೇ ಇಲ್ಲ, ಎಂದುಕೊಂಡೆ. ಅವನಿಗೆ ಸ್ನೇಹಿತರೇ ಕಡಿಮೆ. ತನಗೆ ಫಿಟ್ಸ್ ಇದೆ, ತಾನು ಆರೋಗ್ಯವಂತ ಅಲ್ಲ ಎನ್ನುವ ಕೊರಗೂ ಇತ್ತು. ಅದಕ್ಕೇ ಅವನಿಗೆ ಯಾರೊಡನೆ ಬೆರೆಯಲೂ ಸಂಕೋಚ. ಅದೂ ಈ ವರ್ಷವಷ್ಟೇ ಈ ಊರಿಗೆ ಬಂದದ್ದು. ಕಾಲೇಜ್‌ನಲ್ಲಿ ರಜಾ ಡಿಕ್ಲೇರ್ ಮಾಡಿ 3 ತಿಂಗಳು ಕಳೆದಿವೆ. ಇನ್ನೆರಡು ದಿನಕ್ಕೆ ಅಂದ್ರೆ ನಾಡಿದ್ದು ರೀ ಓಪನ್ ಆಗುತ್ತಂತೆ, ಅಲ್ಲಿ ವಿಚಾರಿಸಿದಾಗ ತಿಳಿದದ್ದು ಅಷ್ಟು. ನನಗೆ ತಿಳಿದ ನಮ್ಮ ಸುರೇಶನ ಒಬ್ಬ ಸ್ನೇಹಿತನನ್ನು ಕೇಳಿದೆ. ರಜೆಯ ಹಿಂದಿನ ದಿನ ಬೆಳಿಗ್ಗೆ ಕಾಲೇಜ್‌ಗೆ ಬಂದಿದ್ದನೆಂದೂ, ಸಂಜೆ ಕಾಲೇಜ್ ಡೇ ಫಂಕ್ಷನ್‌ಗೆ ಬರುತ್ತೇನೆಂದು ತಿಳಿಸಿದವ ಮತ್ತೆ ಬರಲಿಲ್ಲ ಎಂದೂ ತಿಳಿಸಿದ. ನಾನು ಆ ಕೂಡಲೇ ಗಾಭರಿಯಾಗಿ, ಏನು ಮಾಡಲೂ ತೋಚದೇ ಸುಶೀಲ ನಗರ ದಲ್ಲೇ ಅಂದರೆ ಅಲ್ಲಿಂದ ಹತ್ತಿರದಲ್ಲೇ ಇರುವ, ನನಗೆ ಇತ್ತೀಚೆಗೆ ಪರಿಚಯ ವಾದ ಗಂಗಾಧರ ವಕೀಲರ ಮನೆಗೆ ಓಡಿದೆ. ನಾನು ಅಲ್ಲಿಗೆ ಹೋದಾಗ, ಈ ರಾಜಾರಾಯರೂ ಅವರ ಮನೆಯಲ್ಲೇ ಮಾತಾಡುತ್ತ ಕೂತಿದ್ದರು. ಇವರೂ ಗಂಗಾಧರ ವಕೀಲರೂ ಸ್ನೇಹಿತರಂತೆ. ವಿ. ಆರ್. ಮುರುಕಿನ ಮನಿಯವರು ಇಷ್ಟುದ್ದ ಮಾತಾಡಿ ಸುಸ್ತಾದವರಂತೆ ಕೊಂಚ ಹೊತ್ತು ಕಟಕಟೆಗೊರಗಿ ಸುಮ್ಮನೆ ನಿಂತುಬಿಟ್ಟರು.

"ನೀವು ಗಂಗಾಧರ ವಕೀಲರ ಮನೆಗೆ ಹೋಗಿದ್ದು ಯಾವಾಗ?"

"ಕಳೆದ ಭಾನುವಾರ, ಈಗ ಹತ್ತು ದಿನಗಳ ಹಿಂದೆ, ಈ ವಕೀಲರೆದುರಿಗೆ ನನ್ನ ಮಗ ಕಣ್ಮರೆಯಾಗಿರುವ ವಿಷಯ ಹೇಳಿದೆ. ನನ್ನ ಹೆಸರು ಕೇಳಿದರು ಇವರು. ನಾನು ವಿ. ರಾಮಚಂದ್ರ ಮುರ್ಕಿನಮನಿ ಎಂದೆ. ಗಂಗಾಧರ ವಕೀಲರಿಗಿಂತ ಹೆಚ್ಚು ಆಸಕ್ತಿಯಿಂದ ಇವರು ನನ್ನ ಮಗನ ಓದು ವಿದ್ಯಾಭ್ಯಾಸ, ರೂಪ, ಗುಣ ಆರೋಗ್ಯಗಳ ಬಗ್ಗೆ ಕೇಳಿದರು. ನಾನು ಎಲ್ಲ ವಿವರಗಳನ್ನೂ ಹೇಳುತ್ತ ಹೋದೆ. ಪೋಲೀಸರಿಗೆ ದೂರು ಕೊಟ್ಟು ನನ್ನ ಮಗನನ್ನು ಹುಡುಕಿಸಿಕೊಡಿ ಎಂದು ಇವರನ್ನೂ ಗಂಗಾಧರರನ್ನೂ ಕೇಳಿದೆ. ಈ ವಕೀಲರು, ಎಲ್ಲ ಕೇಳಿ ಕೊನೆಗೆ, ಕಂಪ್ಲೇಂಟ್ ಕೊಡುವುದರಿಂದ ಏನೂ ಪ್ರಯೋಜನವಾಗಲ್ಲ ಎಂದರು. ಮರುದಿನ ತಮ್ಮ ಮನೆಗೆ ಬಂದರೆ ಎಲ್ಲ ವಿಷಯ ತಿಳಿಸುತ್ತೇನೆ ಎಂದರು. ನಾನು ಹೋಗಿದ್ದೆ, ನನ್ನ ಮಗ ಸತ್ತು ಹೋಗಿರುವ ವಿಷಯ ತಿಳಿಸಿ, ನನ್ನ ಮನಸ್ಸಿನಲ್ಲಿದ್ದ ಆಸೆ, ಭರವಸೆಗಳನ್ನೆಲ್ಲ ಒಮ್ಮೇಲೆ ಮಣ್ಣುಪಾಲು ಮಾಡಿಬಿಟ್ಟರು. ಈಗ ನಾನು ಹೇಗೆ ಮನೆಗೆ..." ಎಂದು ಮುಂದೆ ಹೇಳಲಾಗದೇ ಭೋರನೇ ಅಳತೊಡಗಿಬಿಟ್ಟರು ವಿ. ಆರ್. ಮುರ್ಕಿನಮನಿಯವರು.

ಸ್ವಲ್ಪ ಹೊತ್ತು ಕೋರ್ಟಿನ ತುಂಬಾ ಬರಿಯ ನಿಶಬ್ಧ ಆವರಿಸಿತು.

"ರಾಮಚಂದ್ರಪ್ಪ ಅವರೇ, ಸುರೇಶ ನಿಮ್ಮ ಮಗ ಎನ್ನುತ್ತೀರಿ, ರಾಘವಪ್ಪ ಮುರ್ಕಿನಮನಿಗೂ ಸುರೇಶ ನಿಮ್ಮ ಮಗ ಎಂದು ತಿಳಿದಿತ್ತಲ್ಲವೇ? ಇನ್ನೊಬ್ಬರ ಮಗನನ್ನು ತನ್ನ ಮಗ ಎಂದು ಹೇಳಿಕೊಳ್ಳುವ ಧೈರ್ಯ ಅವರಿಗೆ ಹೇಗೆ ಬಂತು? ತನ್ನ ಮಗ ಎಂದು ಯಾಕೆ ಹೇಳಿದರು?

"ಯಾಕೆ ಹೇಳಿದರೋ ಗೊತ್ತಿಲ್ಲ. ಆದರೆ ನಾನೂ ಅವರ ಹೆಂಡತಿಯಂತೆಯೇ, ಒಮ್ಮೆ ಪಾರ್ಶ್ವವಾಯುವಿಗೆ ತುತ್ತಾಗಿ ಹಿಂದಿರುಗಿ ಆರೋಗ್ಯ ಪಡೆದವ. ಆದ್ದರಿಂದ ಈ ಬೆಡಗಿನೂರಿಗೆ ಬರುತ್ತಿದ್ದುದು ತುಂಬಾ ಅಪರೂಪವೇ. ಈ ಹತ್ತು ತಿಂಗಳಲ್ಲಿ ನಾನು ಇಲ್ಲಿಗೆ ಬಂದುದು ಎರಡೇ ಸಲ. ಹೆಚ್ಚು ಓಡಾಡಲಾರೆ, ಹೆಚ್ಚು ಮಾತಾಡಲಾರೆ. ನನ್ನ ಈ ಎಲ್ಲ ದೌರ್ಬಲ್ಯಗಳೂ ರಾಘವಪ್ಪನಿಗೆ ಚೆನ್ನಾಗಿ ಗೊತ್ತಿತ್ತು. ನನ್ನ ಬಿಟ್ಟರೆ ಇಲ್ಲಿಗೆ ಬರು

ವವರು ಯಾರೂ ಇಲ್ಲ. ನನ್ನ ಹೆಂಡತಿ ಪಕ್ಕಾ ಹಳ್ಳಿ ಹೆಂಗಸು. ಮನೆಯಲ್ಲಿ ನಾನು, ನನ್ನ ಹೆಂಡತಿ ಬಿಟ್ಟರೆ, ನಮಗೆ ಇದ್ದುದೇ ಈಗ ಸತ್ತಿರುವ ಸುರೇಶ ಒಬ್ಬನೇ" ಎಂದ ರಾಮಚಂದ್ರಪ್ಪ, ಮತ್ತೆ ಅಳತೊಡಗಿದರು.

ರಾಜಾರಾಯರು, ಪಬ್ಲಿಕ್ ಪ್ರಾಸಿಕ್ಯೂಟರು ಒಟ್ಟುಗೂಡಿ ಮುಂದೆ ಕೇಳಿದ ಎಲ್ಲ ಪ್ರಶ್ನೆಗಳಿಗೆ, ಮಾತೇ ಆಡಲಾಗದೇ ಹೂಂ, ಇಲ್ಲ ಎಂದಷ್ಟೇ ತಲೆ ಅಡಿಸುತ್ತಾ ಹೇಳಿದಾಗ, ರಾಜಾರಾಯರು ತಾವೇ ತಮ್ಮ ಅಭಿಪ್ರಾಯವನ್ನು ಕೋರ್ಟಿನ ಮುಂದಿಟ್ಟರು.

"ಇವೊತ್ತು ಗುರುವಾರ, ಕಳೆದ ಭಾನುವಾರ ನನ್ನ ಫ್ರೆಂಡ್ ಗಂಗಾಧರ ವಕೀಲರ ಮನೆಗೆ ಹೋದಾಗ, ಇವರೂ ಅಲ್ಲಿಗೆ ಬಂದು ತಮ್ಮ ಮಗ ನಾಪತ್ತೆಯಾದ ವಿಷಯವನ್ನು ಅತೀವ ಗಾಭರಿ ಭಯಗಳಿಂದ ವರ್ಣಿಸಿದಾಗ ನಾನೂ ಕುತೂಹಲ, ಆಸಕ್ತಿಗಳಿಂದ ಎಲ್ಲವನ್ನೂ ಕೇಳಿಸಿಕೊಂಡೆ. ಮಗನ ರೂಪುರೇಷೆ, ಆರೋಗ್ಯ ಇತ್ಯಾದಿಗಳ ಬಗ್ಗೆ ಹೇಳುವಾಗ, ನನ್ನ ಮನದಲ್ಲಿ ಸರಿದಾಡತೊಡಗಿದ ಅನುಮಾನ, ಪೂರ್ಣ ವಿವರ ಪಡೆದಾಗ, ಮೇಲೆದ್ದು ಹೆಡೆ ಎತ್ತಿ ನಿಂತು ಇನ್ನೂ ಇನ್ನೂ ಪ್ರಶ್ನೆಗಳನ್ನು ಕೇಳಿತು, ದಯಾಕರ ಮತ್ತವನ ಪತ್ನಿಗೆ ದಾರಿಯಲ್ಲಿ ಸಿಕ್ಕ ಸುರೇಶನೇ ಇವರ ಹುಡುಗ ಎನ್ನುವುದಕ್ಕೆ ಬೇರೆ ಸಾಕ್ಷಿಯೇ ಬೇಕಿರಲಿಲ್ಲ. ಮರುದಿನ ನಮ್ಮ ಮನೆಗೆ ಬರಹೇಳಿ, ಮಗನ ಫೋಟೋಗಳನ್ನು, ಬರ್ತ್‌ಡೇ ಪ್ರಮಾಣಪತ್ರ, ಜಾತಕ ಮತ್ತಿತರ ದಾಖಲೆಗಳನ್ನು ಆದಷ್ಟು ಬೇಗ ಕಳಿಸಿಕೊಡುವಂತೆ ಹೇಳಿ, ದಯಾಕರನಿಗೂ ಪರಿಚಯ ಮಾಡಿಕೊಟ್ಟೆ, ಆದರೆ ವಿ. ಆರ್. ಮುರುಕಿನಮನಿ ಈ ಪ್ರಕರಣಕ್ಕೆ ಮುಖ್ಯ ಸಾಕ್ಷಿ ಎಂದು ಹೇಳಿದನೇ ಹೊರತು, ಯಾರು ಎಂದು ಮಾತ್ರ ಹೇಳಲಿಲ್ಲ. ಇನ್ನೊಂದು ವಾರದಲ್ಲಿ ಕೋರ್ಟಿನಲ್ಲೇ ತಿಳಿಯುತ್ತೆ ಎಂದೆ. ಏಕೆಂದರೆ ಈ ರಹಸ್ಯ ನಮಗೆ ತಿಳಿದಿದೆ ಎನ್ನುವುದರ ಬಗ್ಗೆ ರಾಘವಪ್ಪ ಮುರ್ಕಿನಮನಿಗೆ ಕೊಂಚ ಸುಳಿವು ಸಿಕ್ಕಿದರೂ, ಅವನ ಬುದ್ಧಿವಂತ ಬುರುಡೆ ಈ ಬಗ್ಗೆ ನೂರು ದಾಖಲೆ ಸೃಷ್ಟಿ ಮಾಡಿ, ತನ್ನ ಮಗನೇ ಎಂದು ತೋರಿಸಲು ಅದನ್ನು ಕೋರ್ಟಿಗೆ ತರುತ್ತಿದ್ದನೋ, ಅಥವಾ ಮಗ ಏನೂ ಓದಿಲ್ಲಾ ಎಂದೂ ಜಾತಕ, ಫೋಟೋ ಯಾವುದೂ ಇಲ್ಲ ಎಂದ ಹಾಗೆಯೇ ಇನ್ನೂ ಏನೇನು ಹೇಳುತ್ತಿದ್ದನೋ, ಸತ್ತವನ ಬಗ್ಗೆ ಏನಾದರೂ ಹೇಳಬಹುದಲ್ಲ.

ವಿ. ಆರ್. ಮುರುಕಿನಮನಿಯಂಥ ಅನಾರೋಗ್ಯದ ಮನುಷ್ಯನ ಮೇಲೆ ಏನು ಕೈವಾಡವಾದರೂ ನಡೆಸಬಹುದಲ್ವಾ ? ಹಾಗೆಂದೇ 10 ದಿನಗಳ ಹಿಂದೆಯೇ ತಿಳಿದ ಈ ಸಂಬಂಧದ ರಹಸ್ಯ ಅಪಾದಿತನಿಗೂ ತಿಳಿಸದೇ ಗುಟ್ಟಾಗಿ ಇಡಬೇಕಾಯ್ತು". ರಾಜಾರಾಯರು ಈ ಮಾತು ಸ್ಪಷ್ಟ ಪಡಿಸಿದಾಗ, ಕೋರ್ಟಿನಲ್ಲಿ ಸೇರಿದ, ಕುತೂಹಲ ತುಂಬಿಕೊಂಡ ತಲೆಗಳು ರಾಜಾರಾಯರ ಜಾಣ್ಮನಕ್ಕೆ ಮೆಚ್ಚಿ ತೂಗಿದವು,

ವಿ. ರಾಮಚಂದ್ರಪ್ಪ ಮುರ್ಕಿನಮನಿಯವರ ಮಗನೇ ಸುರೇಶ್ ಮುರ್ಕಿನಮನಿ, ಅವನು ಈಗ ಕೊಲೆಯಾದನೆಂದು ಹೇಳಲಾದ ಹುಡುಗನೆ ಎಂದು ತೋರಿಸುವ. ಈ ಫೋಟೋಗಳನ್ನೂ, ಶಾಲಾ ಕಾಲೇಜುಗಳ ಪ್ರಮಾಣ ಪತ್ರಗಳನ್ನೂ, ಫಿಟ್ಸ್ ಇದೆ ಎಂದು ತಿಳಿಸಿರುವ ವೈದ್ಯಕೀಯ ಪ್ರಮಾಣ ಪತ್ರಗಳನ್ನೂ, ನಿನ್ನೆಯಷ್ಟೇ ತಂದು ಕೊಟ್ಟಿದ್ದಾರೆ ಇವರು. ಇದೋ ನೋಡಿ ಪರಿಶೀಲಿಸಿ", ಎಂದ ರಾಜಾರಾಯರು, ತಾವು ಸಂಗ್ರಹಿಸಿದ ಎಲ್ಲ ದಾಖಲೆಗಳನ್ನೂ ಭಾವಚಿತ್ರಗಳನ್ನೂ ನ್ಯಾಯಾಧೀಶರಿಗೆ ಒಪ್ಪಿಸಿದರು, ನ್ಯಾಯಾಧೀಶರು ಅವನ್ನೆಲ್ಲ ನೋಡಿದ ಮೇಲೆ ಪುನಃ ತಮ್ಮ ವಾದ ಸರಣಿಯನ್ನು ಆರಂಭಿಸಿದರು ರಾಜಾರಾಯರು.

"ಶ್ಯಾಮಾಪುರದಲ್ಲಿ ಹೊಲ, ಮನೆ ನೋಡಿಕೊಂಡು ಬದುಕು ನಡೆಸುತ್ತಿರುವ ವಿ. ಆರ್. ಮುರುಕಿನ ಮನಿಯವರು ಮಗನನ್ನು ವಿದ್ಯಾಭ್ಯಾಸಕ್ಕಾಗಿ ಈ ಊರಲ್ಲಿ ಬಿಟ್ಟಿದ್ದರು. ಮೊದಲು ಈ ಸುರೇಶ್, ರಾಘವಪ್ಪ ಮುರ್ಕಿನಮನಿಯ ಈಗಿರುವ ಮನೆಯ ಒಂದು ಕೋಣೆಯಲ್ಲಿ 1 1/2 ತಿಂಗಳು ವಾಸ ಮಾಡಿಕೊಂಡಿದ್ದರಿಂದ, ಅವನ ಡೈರಿಯಲ್ಲಿ ಆ ವಿಳಾಸವೇ ಇತ್ತು. ಕೋಣೆ ಬದಲಿಸಿದ ಮೇಲೆ ಹೊಸ ವಿಳಾಸವನ್ನು ಅವನು ಡೈರಿಯಲ್ಲಿ ನೋಟ್ ಮಾಡಿ ಕೊಳ್ಳದೇ ಬಿಟ್ಟಿದ್ದರಿಂದ, ದಯಾಕರ ಹಳೆಯ ವಿಳಾಸಕ್ಕೇ ಹೆಣ ತೆಗೆದುಕೊಂಡು ಹೋದ. ಆ ಚಿಕ್ಕ ತಪ್ಪು ಇಷ್ಟು ದೊಡ್ಡ ಹಗರಣಕ್ಕೆ ಕಾರಣವಾಯಿತು. ಕೇವಲ ಒಂದೂವರೆ ತಿಂಗಳು ಮಾತ್ರ ರಾಘವಪ್ಪನ ಮನೆಯಲ್ಲಿ ಇದ್ದು ಹೋದ ಸುರೇಶನ ಮುಖವನ್ನು ಅವರ ನೆರೆಹೊರೆಯವರು ಗುರುತಿಟ್ಟು ಕೊಂಡಿಲ್ಲ ಎಂದರೆ ಆಸಹಜವೇನಲ್ಲ. ಆ ರಾತ್ರಿಯಲ್ಲಿ

ಸುರೇಶನ ಹೆಣವನ್ನು ನೋಡಿದರೂ ಸುರೇಶನೇ ಇವರ ಮಗ ಇದ್ದಿರಬೇಕು ಎಂದುಕೊಂಡಿರಬಹುದು. ಅವರು ಮೇಲಾಗಿ ಸುರೇಶ ಇವರ ಮನೆಯಲ್ಲಿದ್ದಾಗ, ಮನೆಗೆ ಬರುತ್ತಿದ್ದುದು ರಾತ್ರಿ ಹೊತ್ತು ಮಾತ್ರವಾದ್ದರಿಂದ, ಅವನ ಇರುವಿಕೆ, ಇಲ್ಲದಿರುವಿಕೆ ಎರಡೂ ಒಂದೇ ಆಗಿತ್ತು. ಮಾತುಬಾರದ ಖಾಯಿಲೆ ಹೆಂಡತಿ, ಯಾರ ಕೈಗೂ ಸಿಗದೇ ತನ್ನ ವ್ಯಾಪಾರ ನಡೆಸುವ ರಾಘವಪ್ಪ, ಬೆಣ್ಣೆಯಂತೆ ಮಾತಾಡಿ ಸುಳ್ಳು ನಿಜಗಳನ್ನು ತಿಳಿಯದಂತೆ ಮೋಡಿ ಹಾಕುವ ಮಗಳು ರಾಣಿ, ಇವರು ಯಾರಿಂದಲೂ ನೆರೆಯವರಿಗೆ ಯಾರಿಗೂ, ಯಾವ ಸಂಬಂಧವೂ ತಿಳಿಯುವಂತೇ ಇರಲಿಲ್ಲ.

ಆ ದಿನ ಕಾಲೇಜ್‌ನಲ್ಲಿ ನಡೆಯಲಿದ್ದ ವ್ಯಾಲಿಡಿಕ್ಟರಿ ಫಂಕ್ಷನ್‌ಗೆಂದು ನೀಟಾಗಿ ಡ್ರೆಸ್ ಮಾಡಿಕೊಂಡು ಹೊರಬಿದ್ದ ಸುರೇಶ್ ಮುರುಕಿನಮನಿ ಸುಶೀಲ ನಗರದ ಫೇಮಸ್ ಕಾಲೇಜ್‌ನಲ್ಲಿ ಓದುತ್ತಿದ್ದುದು. ಮಾರುತಿ ಗುಡ್ಡದ ಅವನ ಕೋಣೆಯಿಂದ ಕಾಲೇಜ್‌ಗೆ ನಡೆದು ಹೋಗುವಾಗ, ಈ ಅನಾಹುತ ಸಂಭವಿಸಿದೆ. ಈ ಬಗ್ಗೆ ಏನೂ ತಿಳಿಯದ ತಂದೆ-ತಾಯಿಗಳಾಗಲೀ, ಸಹಪಾಠಿಗಳಾಗಲೀ ಯಾರಿಗೂ ವಿಚಾರಿಸಲು ಹೋಗಿಲ್ಲ. ದುರಾದೃಷ್ಟವಶಾತ್ ಮರುದಿನದಿಂದಲೇ ಕಾಲೇಜ್‌ಗೆ ರಜಾ ಬೇರೆ. ಸುರೇಶನ ರೂಮಿನ ಮಾಲೀಕರಿಗೆ ಮತ್ತು ಸ್ನೇಹಿತರಿಗೆ, ಅವನು ರಜೆಯಲ್ಲಿ ಊರಿಗೆ ಹೋಗಿರಬಹುದು ಎನ್ನುವ ಊಹೆ. ಪರೀಕ್ಷೆಗೆ ಹಾಜರಾಗದಿದ್ದುದು ಏಕೆ ಎನ್ನುವ ಸಂದೇಹ ಬಂದರೂ ಕಾರಣ ತಿಳಿಯಲು ಶ್ಯಾಮಾಪುರಕ್ಕೇ ಬರೆಯಬೇಕು. ಅಷ್ಟೊಂದು ಆಸಕ್ತಿ ಇರುವ ಗೆಳೆಯರಿರಲಿಲ್ಲ ಅವನಿಗೆ.

"ಊರಿಗೆ ರಜೆಯಲ್ಲಿ ಏಕೆ ಬರಲಿಲ್ಲ, ಪರೀಕ್ಷೆ ಮುಗಿಸಿದ ಮೇಲಾದರೂ ಬರಬಹುದೇ?" ಎನ್ನುವ ಕಳವಳ, ಅನುಮಾನ ಹುಟ್ಟಿದ್ದು ಅವನ ತಂದೆ-ತಾಯಿಗೆ ಮಾತ್ರ, ಸ್ವಲ್ಪ ದಿನ ಕಾದರು. ಪತ್ರಗಳ ಮೇಲೆ ಪತ್ರ ಬರೆಸಿ ಕಾದರು. ಮಗ ಬರಲಿಲ್ಲ, ಯಾವ ಉತ್ತರವೂ ಸಿಗಲಿಲ್ಲ. ದಿನೇ ದಿನೇ ಹೃದಯ ಹಿಂಡತೊಡಗಿದ ಅವರ ಹೆಂಡತಿಯ ಮನದಲ್ಲಿದ್ದ ಭಯ, ಗಂಡನಿಗೆ ಬೆಡಗಿನೂರಿಗೇ ಹೋಗಿ ಬರುವಂತೆ ಹೇಳಿ ಬಲವಂತಿಸಿತು. ಅವರು ಧಾವಿಸಿ ಬಂದರು. ಹೀಗಾಗಿ ಯಾರು ಯಾರಿಗೂ ದೂರು ಕೊಡಲಿಲ್ಲ. ದೂರು ಕೊಟ್ಟಿದ್ದರೆ ರಾಘವಪ್ಪ, ಮುರುಕಿನ ಮನಿಯ ಬೇಡಿಕೆ ಈ ಕೋರ್ಟ್

ವರೆಗೆ ಬರುತ್ತಿತ್ತೋ ಇಲ್ಲವೋ, ತಾನೊಬ್ಬನೇ ವಿ. ಆರ್. ಎಂ.ಗೆ ಪರಿಚಿತ, ಕೇಳಿದರೆ ಓಡಿ ಬಂದು ತನ್ನನ್ನೇ ಅವರು ಕೇಳೋದು ಎಂಬ ನಂಬಿಕೆ ರಾಘವಪ್ಪನವರಿಗೆ. ಹಾಗೆ ಬಂದಿದ್ದರೆ, ಅವರನ್ನು ತನ್ನ ಪಾಲುದಾರರಾಗುವಂತೆ ಒತ್ತಾಯಿಸಿ ಸೇರಿಸಿಕೊಂಡು, ಈ ಪ್ರಕರಣ ಇನ್ನೊಂದು ರೀತಿಯಲ್ಲಿ ಕೊನೆಗೊಳ್ಳುತ್ತಿತ್ತೋ ಏನೋ. ಆದರೆ ದಯಾಕರ ಮತ್ತು ಸುಮನಾರ ಅದೃಷ್ಟ. ವಿ. ಆರ್. ಮುರುಕಿನಮನಿಯವರು ಸೀದಾ ಸುರೇಶನ ಕೋಣೆಯ ಯಜಮಾನರಿಗೆ ಕೇಳಿ, ಅಲ್ಲಿಂದಲೂ ಇವರಲ್ಲಿಗೆ ಬರದೇ ಗಂಗಾಧರ ವಕೀಲರಲ್ಲಿಗೆ ನಡೆದದ್ದು ದಯಾಕರನ ಸಂಸಾರದಲ್ಲಿ ಅದೃಷ್ಟ ತನ್ನ ಕೈಯಾಡಿಸಿದ್ದರ ಫಲವಿರಬೇಕು. ನನ್ನ ಅವರ ಆಕಸ್ಮಾತ್ ಭೇಟಿ, ನನ್ನೆದುರೇ ನಾಪತ್ತೆಯಾದ ಮಗನ ವಿಚಾರಣೆ ಇದೆಲ್ಲ ತೀರಾ ಆಕಸ್ಮಿಕ. ನನಗೂ ಸುರೇಶ್ ರಾಘವಪ್ಪನ ಮಗನೇ ಅಲ್ಲ ಎನ್ನುವ ರಹಸ್ಯ ತಿಳಿದದ್ದು ಆಗಲೇ" ರಾಜಾರಾಯರು ಕಥೆ ಹೇಳಿದಂತೆ ಏನೇನು ನಡೆಯಿತು, ಹೇಗೆ ನಡೆಯಿತು ಎಂದು ಬಣ್ಣಿಸುವಾಗ, ಅದಾವಾಗಲೋ ರಾಘವಪ್ಪ ಮುರ್ಕಿನಮನಿ ಕೋರ್ಟಿನ ಹೆಬ್ಬಾಗಿಲು ದಾಟಿದ್ದ, ಎಲ್ಲರ ಕಣ್ಣು ತಪ್ಪಿಸಿ. ಆದರೆ ಈ ಸಲ ಬಾಗಿಲಲ್ಲಿ ನಸುಳುತ್ತಿದ್ದ ಅವನನ್ನು ನೋಡಿದ್ದು ಪೋಲೀಸ್ ಆಫೀಸರ್ ಶೇಖರ್‌ರವರೇ. ನಿಂತಲ್ಲಿಂದ ಹಾರಿ ಹೋಗಿ, ಅವನ ಕೈ ಹಿಡಿದು ಎಳೆದು, ಹೊರಗೆ ನಿಂತ ಪೇದೆಗಳಿಬ್ಬರ ವಶಕ್ಕೆ ಒಪ್ಪಿಸಿ, ತಾವೂ ಅಲ್ಲೇ ನಿಂತು ರಾಜಾರಾಯರ ಬಣ್ಣದ ಕಥೆಯನ್ನು ಆಲಿಸತೊಡಗಿದರು.

"ರಾಘವಪ್ಪ ಮುರ್ಕಿನಮನಿ ಯಾವ ವ್ಯಾಪಾರಕ್ಕೆ ಕೈ ಹಾಕಿದ್ರೂ ತಲೆಗೆ ಹತ್ತಿದ್ದು ಬರೀ ನಷ್ಟ". ರಾಜಾರಾಯರ ಕಥೆ ಇನ್ನೂ ಮುಗಿದಿರಲಿಲ್ಲ. ಒಂದರಿಂದ ಇನ್ನೊಂದು ವ್ಯಾಪಾರಕ್ಕೆ ಇಳಿಯುವಾಗ ಮೇಲಿಂದ ಮೇಲೆ ಆದ ಹಣದ ಕಡಿತ, ಏರುತ್ತಿರುವ ಸಾಲದ ಹೊರೆ, ಹಲವು ವರ್ಷಗಳಿಂದ ಪಾರ್ಶ್ವವಾಯುವಿಗೆ ತುತ್ತಾಗಿ, ಯಾವ ಉಪಯೋಗಕ್ಕೂ ಆಗದಂತೆ ಮಾರ್ಪಾಡಾಗಿ, ವಿಕಾರ ಕೂಗಿನೊಡನೆ ನರಳುತ್ತ, ಮಲಗಿರುವ ಹೆಂಡತಿಯ ಔಷಧೋಪಚಾರದ ಚಿಂತೆ, ಸಾಲಗಾರರ ಯೋಚನೆ, ಇವೆಲ್ಲ ರಾಘವಪ್ಪನವರನ್ನು ಒಂದೇ ಸಮ ಕಾಡಿಸಿ ಹಣವನ್ನು ಹೇಗಾದರೂ ಗಳಿಸಲೇಬೇಕೆಂಬ ಹುಚ್ಚು ಹಿಡಿಸಿ ಅಡ್ಡದಾರಿಗೊಯ್ದವು. ಸುರೇಶ ಮುರುಕಿನ

ಮನಿ ರಾಘವಪ್ಪನ ಮಗನೇ ಅಲ್ಲ ಎನ್ನುವ ಸತ್ಯವನ್ನು ಪೋಲೀಸ್ ಆಫೀಸರೆದುರಾಗಲೀ, ಕ್ರಿಮಿನಲ್ ಲಾಯರ್ ಎದುರಾಗಲೀ ಎಂದೂ ಬಾಯಿ ಬಿಡಲಿಲ್ಲ. ಮಗಳೂ ಅಷ್ಟೆ. ಯಾರ ಪ್ರಶ್ನೆಗಳಿಗೂ ಯಾವ ರೀತಿಯಲ್ಲೂ ಸಿಕ್ಕಿ ಹಾಕಿಕೊಳ್ಳದಂಥ ಉತ್ತರ ಅವರದು. ನೋಡಲು ಲಕ್ಷಣವಾಗಿರುವ ದೊಡ್ಡ ಮನುಷ್ಯರಂತೆ ವರ್ತಿಸುವ ಹಾಗೂ ಒಳ್ಳೆಯ ಕಳೆಯಲ್ಲಿ ನಯವಾಗಿ ಮಾತಾಡುವ ರಾಘವಪ್ಪ ಮುರ್ಕಿನಮನಿಯ ಮೇಲೆ ಎಲ್ಲರಿಗೂ ಏನೋ ನಂಬಿಕೆ. ಯಾವ ರೀತಿಯ ಆಕರ್ಷಣೆಯೂ ಇಲ್ಲದ. ಬೇಡದ ರಗಳೆಗೆ ಸಿಕ್ಕಿ ಸೋತು, ತಮ್ಮ ಪ್ರಶ್ನೆಗಳಿಗೆ ಒರಟಾಗಿ ಉತ್ತರ ಕೊಡುವ ಜೋಡಿಗಳ ಮೇಲೇ ಅನುಮಾನ. ರಾಘವಪ್ಪನ ಬಗ್ಗೆ ಅನುಮಾನ ಹೆಚ್ಚಿಲ್ಲ ಎಂದಾಗ ಅವರ ಬಗ್ಗೆ ಕೂಲಂಕುಷ ತನಿಖೆ ಎಲ್ಲಿ?"

ಈಗ ಸುರೇಶ್ ಮುರುಕಿನಮನಿ ರಾಘವಪ್ಪನ ಮಗನೇ ಅಲ್ಲ ಎಂದ ಮೇಲೆ ಸುರೇಶ್‌ಗೆ ಫಿಟ್ಸ್ ಬಂದೇ ಬಿದ್ದದ್ದು ಎಂದ ಮೇಲೆ, ರಾಘವಪ್ಪನ ಆರೋಪಕ್ಕೆ ಏನು ಬೆಲೆ? ದಯಾಕರ, ಸುಮನಾ, ಗುರುರಾಜ್, ಶಂಕರಪ್ಪ, ಇವರೆಲ್ಲ ನಿಜವಾಗಲೂ ದಾರಿಯಲ್ಲಿ ಬಿದ್ದವನನ್ನು ಮನೆಗೆ ತಲುಪಿಸುವ, ಆಸ್ಪತ್ರೆಗೆ ಸೇರಿಸುವ ಕರುಣೆ ತೋರಿದ ಉದಾರ ಮನಸ್ಸಿನ ಸದ್ಗುಣಿಗಳು. ಸುರೇಶನದು ಫಿಟ್ಸ್ ಮೂಲಕ ಆದ ಸ್ವಾಭಾವಿಕ ಸಾವು. ಕೊಲೆಯೇ ಅಲ್ಲ. ರಾಘವಪ್ಪ ಮುರುಕಿನ ಮನಿಯ ಸಂಬಂಧಿ ಜಾರ್ಜ್, ಪೋಲೀಸ್ ಪೇದೆ ಹರಿಶ್ಚಂದ್ರ, ಎದುರು ಮನೆಯವ, ವಿಶ್ವಾಸದ ಮಾಲಿಕ, ಇವರೆಲ್ಲ ದುಡ್ಡಿನಿಂದ ಅಥವಾ ದುಡ್ಡಿಗಾಗಿ ಹುಟ್ಟಿಕೊಂಡ ಸಾಕ್ಷಿಗಳು" ಎಂದು ರಾಜಾರಾಯರು ತಮ್ಮ ಕೊನೆಯ ಮಾತು ಹೇಳಿ ಮುಗಿಸಿ ನ್ಯಾಯಾಧೀಶರ ಮುಖ ನೋಡಿದರು.

ರಾಘವಪ್ಪ ಮುರುಕಿನಮನಿಯ ಕಡೆಯವರ ಗುಂಪು ಸಂಪೂರ್ಣ ನೆಲ ನೋಡುತ್ತಾ ಕೂತಿತ್ತು. ರಾಘವಪ್ಪ ನ್ಯಾಯಾಧೀಶರ ಅನುಮತಿ ಪಡೆದು, ತಾನಾಗಿಯೇ ತನ್ನ ಮನಸ್ಸು ತೆರೆದಿಟ್ಟ.

"ರಾಜಾರಾಯರು ಹೇಳಿದ್ದು ನಿಜ. ನಾನು ಚಿಕ್ಕವನಿದ್ದಾಗ ಇಂಥ ಕಟು ಮನಸ್ಸು ನನಗಿರಲೇ ಇಲ್ಲ. ಮನೆಯಲ್ಲಿ ನೂರಾರು ರಗಳೆಗಳು, ಸಾವಿರ ತೊಂದರೆಗಳು. ಎಸ್.ಎಸ್.ಎಲ್.ಸಿ. ಯಾಗುತ್ತಿದ್ದ ಹಾಗೇ

ನನ್ನ ಓದು ಬಿಡಿಸಿ ಮನೆ ಸೇರಿಸಿದವು. ಕೆಲವು ವರ್ಷ ಓದೂ ಇಲ್ಲದೇ ಕೆಲಸವೂ ಇಲ್ಲದೇ ತಿರುಗಿದೆ. ಯಾವ ಯಾವುದೋ ಚಿಲ್ಲರೆ ಕೆಲಸಗಳನ್ನು ಮಾಡುವಾಗಲೇ ಮದುವೆಯಾಯಿತು. ಮದುವೆಯಾಗಿ ರಾಣಿ ಹುಟ್ಟಿದ ಮೇಲೆ, ದುಡಿಮೆ ಇಲ್ಲದೇ ನಮ್ಮ ನಮ್ಮ ಹೊಟ್ಟೆ, ಮಿದುಳುಗಳನ್ನು ಹದ್ದು ಬಸ್ತಿನಲ್ಲಿಡಲು ಸಾಧ್ಯವಿಲ್ಲ ಎನ್ನುವ ಅರಿವು ಬಂತು. ಹಣ ಗಳಿಸುವ ಆಸೆಯೂ ಕ್ರಮೇಣ ನನ್ನಲ್ಲಿ ಹುಟ್ಟಿತು. ಒಳ್ಳೆಯ ವ್ಯಾಪಾರವಿಲ್ಲದೇ ಹಣ ಗಳಿಸು ವಂತಿಲ್ಲ. ಹಣವಿಲ್ಲದೇ ಯಾವ ದೊಡ್ಡ ವ್ಯಾಪಾರವೂ ಶುರು ಮಾಡು ವಂತಿಲ್ಲ, ಎಲ್ಲಿಂದಲೋ ಸಾಲ ಮಾಡಿ ಹಣ್ಣಿನ ವ್ಯಾಪಾರ ಆರಂಭಿಸಿದೆ. ಮಾರಾಟವಾಗುವುದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ನಾನು ಖರೀದಿಸಿದ ಹಣ್ಣು ಗಳು ಕೊಳೆತು ದಿನೇ ದಿನೇ ನನ್ನ ತಲೆಯ ಮೇಲಿನ ಚಿಂತೆ, ಸಾಲ, ಜವಾ ಬ್ದಾರಿಗಳ ಮೂಟೆಯನ್ನು ದೊಡ್ಡದಾಗಿಸಿದುವು. ಹಣ್ಣಿನ ವ್ಯಾಪಾರ ಬಿಟ್ಟು ಪುನಃ ಸಾಲ ಮಾಡಿ ಒಂದು ಹೋಟೆಲ್ ಆರಂಭಿಸಿದೆ. ಅಲ್ಲೂ ನಾನು ಗಂಟು ಕಟ್ಟಿಕೊಂಡದ್ದು ಸಾಲದ ಹೊರೆಯನ್ನೇ. ಈ ಮಧ್ಯೆ ಹುಟ್ಟಿದ ರಾಣಿ, ಮತ್ತೆ ಹುಟ್ಟಿದ ಒಬ್ಬ ಬೆಳೆಯತೊಡಗಿದ್ದು, ಅವರ ವಿದ್ಯಾಭ್ಯಾಸದ ಖರ್ಚೂ ಸೇರಿತು. ನನ್ನ ಮಗ ಈಗ ವರ್ಷದ ಹಿಂದೆ ಕಣ್ತಪ್ಪಿಸಿ ಮನೆ ಬಿಟ್ಟು ಹೋಗಿದ್ದಾನೆ. ಬೆಳೆಯುವ ಮಕ್ಕಳು. ಮೇಲಿಂದ ಮೇಲೆ ಆದ ನಷ್ಟ, ಸಾಲಗಳ ಭಾರ ನನ್ನೊಳಗಿನ ಒಳ್ಳೆಯತನವನ್ನು ಮತ್ತೆ ನೆನಪಿಗೆ ಬರ ದಂತೆ ದೂರ ಓಡಿಸಿದವು. ನ್ಯಾಯ, ನೀತಿ, ಸೌಜನ್ಯತೆ ಇವೆಲ್ಲ ಸುವ್ಯಸ್ಥಿತ ಸಂಸಾರಗಳಲ್ಲಿ ಕಾಣಬಹುದಾದ ವಸ್ತುಗಳಷ್ಟೆ. ನಮ್ಮಂಥವರಿಗೆ ಇದು ಅನವಶ್ಯಕ ಎನಿಸಿತು. ಇವೆಲ್ಲ ತಾನೇ ತಾನಾಗಿ ನನ್ನೊಳಗಿಂದ ದಿನೇ ದಿನೇ ಉದುರಿ ಹೊರಹೋದವು. ನಾನು ಸಂಪೂರ್ಣ ಕಟುಕನಾದೆ, ಸ್ವಭಾವತಃ ದುಷ್ಟನಾದೆ. ನನ್ನ ಮಗಳನ್ನು ಬಾಲ್ಯದಿಂದಲೇ ಕಟುಕಳಾಗಿ, ನಿರ್ದಯಿ ಯಾಗಿ ಬೆಳೆಸಿದೆ. ಅವಳೂ ಅನ್ಯಾಯದ ಒಂದು ಮೂಟೆಯಾದಳು. ದೊಡ್ಡ ದೊಡ್ಡ ಮೊತ್ತದಲ್ಲಿ, ಅಲ್ಪ ಸಮಯದಲ್ಲಿ ಹಣ ಸಂಪಾದನೆ ಮಾಡ ಬೇಕು ಎಂದರೆ ಅದು ನ್ಯಾಯ ಮಾರ್ಗದಲ್ಲಿ ಎಂದೂ ಸಾಧ್ಯವಿಲ್ಲ. ಈ ದಾರಿಯನ್ನು ಬಿಟ್ಟು ನಾನು ಉಳಿದೆಲ್ಲ ದಾರಿಗಳನ್ನು ನನ್ನದಾಗಿಸಿಕೊಂಡೆ. ಮಗಳು ಬೆಳೆದು ನಿಂತು, ಹೆಂಡತಿ ಪಾರ್ಶ್ವವಾಯುವಿಗೆ ತುತ್ತಾಗಿ ನನ್ನ ಈ

ಕಸುಬನ್ನು ಮುಂದುವರಿಸುವುದು ಅನಿವಾರ್ಯವಾಗಿಸಿಬಿಟ್ಟರು.

ಈಗಲೂ ನಾನು ನನ್ನ ಮಗನಲ್ಲದವನನ್ನು ಮಗನೆಂದು ಹೇಳಿದ್ದು, ದಯಾಕರನಿಂದ ಖುದ್ದಾಗಿಯಾದರೂ ಹಣ ವಸೂಲು ಮಾಡಲು ಉಪಾಯ ಹೂಡಿದ್ದು, ಸುಳ್ಳು ಹೇಳಿದ್ದು ಎಲ್ಲ ನಿಜ ಎಂದು ಒಪ್ಪಿಕೊಳ್ಳುವೆನಾದರೂ, ಈ ತಪ್ಪು ನನ್ನ ಜೀವನಕ್ಕೆ ಅನಿವಾರ್ಯ ಎಂದೇ ಹೇಳುತ್ತೇನೆ. ಏಕೆಂದರೆ ನನಗೆ ಮೊದಲು ನಾನು, ನನ್ನ ಹೆಂಡತಿ ಮತ್ತು ಮಗಳು ಮುಖ್ಯವೇ ವಿನಃ ದಯಾಕರ ಮತ್ತವನ ಸಂಸಾರದ ಮರ್ಯಾದೆ ಮುಖ್ಯವಲ್ಲ. ನನಗೆ ಪುಕ್ಕಟೆ ಯಾಗಿ ಹತ್ತು ರೂ. ಆದರೂ ಯಾರು ಕೊಡುತ್ತಾರೆ. ಕೊಟ್ಟರೂ ಎಷ್ಟು ಸಲ ಕೊಡಬಹುದು. ಯಾರನ್ನಾದರೂ ಸಿಕ್ಕಿ ಹಾಕಿಸಿದರೆ, ಹೆದರಿಸಿದರೆ, ಬೆದರಿಸಿದರೇನೇ ಹೆಚ್ಚು ಹಣ ಸಿಕ್ಕಲು ಸಾಧ್ಯ. ಯಾವ ಘಳಿಗೆಯಲ್ಲಾ ದರೂ ದಯಾಕರ ಸೋಲಬಹುದು. ಐದೋ, ಹತ್ತೋ ಸಾವಿರವನ್ನು ಕೊಟ್ಟು ಈ ಕೇಸ್ ಕೈ ಬಿಟ್ಟು ಈ ರಗಳೆ, ತಲೆನೋವುಗಳಿಂದ ಬಿಡುಗಡೆ ಹೊಂದಲು ಆಶಿಸಬಹುದು ಎಂದು ಆ ಹಣಕ್ಕಾಗಿ ಕಾದೆ. ವಿ. ಆರ್. ಮುರುಕಿನಮನಿ ಪಾರ್ಶ್ವವಾಯು ರೋಗಿ. ಇಲ್ಲಿ ಹೇಗೆ ಬಂದಾರು ಎಂಬ ನಿರ್ಭಯತೆಯಿಂದ. ದಯಾಕರ ಕಡೆಗೆ ಎರಡು ಮೂರು ಸಾವಿರ ಕೊಟ್ಟರೂ ಸರಿ ಎಂದು ಕಾದೆ. ಆದರೆ ದಯಾಕರ ಯಾವುದಕ್ಕೂ ಬಗ್ಗಲಿಲ್ಲ." ರಾಘವಪ್ಪ ಇಷ್ಟು ಹೇಳಿ ತಲೆ ತಗ್ಗಿಸಿ ನಿಂತಾಗ ರಾಜಾರಾಯರು ತಮ್ಮ ಒಂದು ಒಂದು ಪ್ರಶ್ನೆ ಕೇಳಿದರು.

"ಅಕಸ್ಮಾತ್ ದಯಾಕರ ಎರಡೋ ಮೂರೋ ಸಾವಿರ ಕೊಟ್ಟಿದ್ರೆ ಅದರಲ್ಲಿ ನಿಮಗೇನು ಸಿಗುತ್ತಿತ್ತು. ಎಲ್ಲ ಈ ಸುಳ್ಳು ಸಾಕ್ಷಿಗಳಿಗೇ ಕೊಡ ಬೇಕಾಗುತ್ತಿತ್ತಲ್ಲ"

ನಕ್ಕುಬಿಟ್ಟ ರಾಘವಪ್ಪ, "ಇಷ್ಟುದ್ದ ಕಥೆ ಹೇಳಿದ ಮೇಲೂ ತಿಳಿಯ ಲಿಲ್ವಾ ಸ್ವಾಮಿ, ನಾನು ಅವರಿಗೆಲ್ಲಿ ಕೊಡುತ್ತಿದ್ದೆ? ತೀರ ಕಾಡಿದರೆ ಐದೋ ಹತ್ತೋ ಕೊಟ್ಟು ಕಳಿಸುತ್ತಿದ್ದೆ. ಮುಂದೆ ಇದಕ್ಕಾಗಿ ನನ್ನ ಕೋರ್ಟ್ ಹತ್ತಿಸಲು ಯಾರೂ ಧೈರ್ಯ ಮಾಡಲ್ಲ. ಸರಕಾರಿ ನೌಕರರಿಗಂತೂ ಈ ಬಗ್ಗೆ ಜೋರಾಗಿ ಯಾರ ಬಳಿ ಹೇಳಿಕೊಳ್ಳುವಂತೆಯೂ ಇಲ್ಲ" ರಾಘವಪ್ಪ

ಎಸ್.ಐ.ರ ಕಡೆ ನೋಡುತ್ತಾ ಹೇಳಿ ನಕ್ಕ. ಎಸ್.ಐ. ಅವನ ಮಾತು ಕೇಳಿಸಿಕೊಳ್ಳದವರಂತೆ ಇನ್ನೆತ್ತಲೋ ನೋಡಿದರು. ಎಲ್ಲ ಸಾಕ್ಷಿಗಳ ಹೇಳಿಕೆ ಮುಗಿದಿತ್ತು. ನ್ಯಾಯಾಧೀಶರು ಇರುವ ದಾಖಲೆಗಳನ್ನು ಮತ್ತೊಮ್ಮೆ ಪರಿಶೀಲಿಸಿ, ತಮ್ಮ ತೀರ್ಪು ನೀಡಿದರು.

"ಸುರೇಶ್ ಮುರ್ಕಿನಮನಿಯ ಸಾವು ಸ್ವಾಭಾವಿಕ. ಅದು ಕೊಲೆ ಅಲ್ಲ. ಹೀಗೆ ಬೇರೊಬ್ಬರನ್ನು ಸುಳ್ಳು ಸುಳ್ಳೇ ನಿಂದೆಗೆ ಗುರಿ ಮಾಡಿ, ಅವರ ಮನಸ್ಸಿಗೆ ಒತ್ತಡ ಹೇರಿ ಕೊಲೆ ಮತ್ತು ಕಳ್ಳತನಗಳಂಥ ಮಹಾ ಆರೋಪವನ್ನು ಹೊರಿಸಿ, ಯಾರದೋ ಮಗನನ್ನು ತನ್ನ ಮಗನೆಂದು ಹೇಳಿ ಕೊಂಡು, ಸಿಗಲಿ ಬಿಡಲಿ 35,000 ರೂ. ಪರಿಹಾರ ಬೇರೆ ಬೇಡಿದ ತಪ್ಪಿಗೆ ರಾಘವಪ್ಪ ಮುರುಕಿನಮನಿಯವರಿಗೆ 2 ವರ್ಷಗಳ ಕಾರಾಗೃಹ ವಾಸ ಮತ್ತು ಸಾವಿರದೈನೂರು ರೂ. ದಂಡ ವಿಧಿಸಲಾಗಿದೆ. ದಯಾಕರ ಮತ್ತು ಸುಮನಾ ನಿರಪರಾಧಿಗಳು ಎಂದು ತೀರ್ಮಾನ ಕೊಡಲಾಗಿದೆ" ಎಂದು ನ್ಯಾಯಾಧೀಶರು ತೀರ್ಪು ಕೊಟ್ಟಿದ್ದನ್ನು, ಮುಂದೆ ಇನ್ಯಾರಾರಿಗೆ ಪುಟ್ಟ ಪುಟ್ಟ ದಂಡನೆ ವಿಧಿಸಿದೆ ಎಂದು ಹೇಳುತ್ತಿದ್ದುದನ್ನು ಕೇಳಿಸಿಕೊಳ್ಳುವ ಅಗತ್ಯ ಯಾರಿಗೂ ಉಳಿದಿರಲಿಲ್ಲ. ತೀರ್ಪು ಏನು ಎನ್ನುವುದನ್ನು ಅಲ್ಲಿ ಸೇರಿದವರೇ ನಿರ್ಧರಿಸುವಷ್ಟು ಪಾರ್ಡಾಗಿ ಕೊನೆಗೊಂಡಿತ್ತು ಪ್ರಕರಣ.

ಸುಳ್ಳಿನ ಕಳ್ಳ ಆಕ್ರಮಣಕ್ಕೆ ಸಿಕ್ಕು ನಲುಗುತ್ತಿದ್ದ ಸತ್ಯ ಅಂತೂ ಸುಳ್ಳನ್ನು ಮಚ್ಚಿ ಮೇಲೆದ್ದು ವಿಜಯದ ಕಹಳೆ ಊದಿತ್ತು, ಆದರೆ ಈ ಸತ್ಯ ತುಂಬಾ ದುಬಾರಿ ಹಾಗೂ ಕಠಿಣ ಹೃದಯ ಎಂದು ದಯಾಕರನ ಸಂಸಾರಕ್ಕೆ ಅನಿಸುವಂತೆ ಮಾಡಿತ್ತು ಅಷ್ಟೆ.